

ಪಿ ಕನ್ನಡ ವಿಶ್ವವಿದ್ಯಾಲಯಕ್ಕೆ ಸಲ್ಲಿಸಿದ ಎಂ.ಫಿಲ್. ಪದವಿಯ ನಿಬಂಧ

# "ಎಂ.ವಿ.ಸೀ. ಯವರ ಸಣ್ಣ ಕಥೆಗಳು: ಒಂದು ಅಧ್ಯಯನ"


ಸಂಶೋಧನ ವಿದ್ಯಾರ್ಥಿ

ರಾಘವೇಂದ್ರಾಚಾರ್ .ಕೆ

ಮಾರ್ಗದರ್ಶಕರು

ಡಾ|| ಪಿ.ವಿ. ನಾರಾಯಣ





ಎಂ.ವಿ.ಸೀ. ಸ್ನಾತಕೋತ್ತರ ಸಂಶೋಧನ ಕೇಂದ್ರ

ಬಿ.ಎಂ.ಶ್ರೀ ಸ್ಮಾರಕ ಪ್ರತಿಷ್ಠಾನ

ಬೆಂಗಳೂರು.

೯- ೨೦೦೦



ಹಂಪಿ ಕನ್ನಡ ವಿಶ್ವವಿದ್ಯಾಲಯಕ್ಕೆ ಸಲ್ಲಿಸಿದ ಎಂ.ಫಿಲ್. ಪದವಿಯ ನಿಬಂಧ

# "ಎಂ.ವಿ.ಸೀ. ಯವರ ಸಣ್ಣ ಕಥೆಗಳು: ಒಂದು ಅಧ್ಯಯನ"

ಸಂಶೋಧನ ವಿದ್ಯಾರ್ಥಿ

ರಾಘವೇಂದ್ರಾಚಾರ್ .ಕೆ

ಮಾರ್ಗದರ್ಶಕರು

ಡಾ॥ ಪಿ.ವಿ. ನಾರಾಯಣ





ಎಂ.ವಿ.ಸೀ. ಸ್ನಾತಕೋತ್ತರ ಸಂಶೋಧನ ಕೇಂದ್ರ

ಬಿ.ಎಂ.ಶ್ರೀ ಸ್ಮಾರಕ ಪ್ರತಿಷ್ಠಾನ

ಬೆಂಗಳೂರು.

೨೦೦೯- ೨೦೧೦

# ಅಭ್ಯರ್ಥಿಯ ಪ್ರಮಾಣ ಪತ್ರ

ಬಿ.ಎಂ.ಶ್ರೀ.ಸ್ಮಾರಕ ಪ್ರತಿಷ್ಠಾನ, ಬೆಂಗಳೂರಿನ ಎಂ.ವಿ.ಸೀ ಸ್ನಾತಕೋತ್ತರ ಸಂಶೋಧನಾ ಕೇಂದ್ರದ ಮೂಲಕ ಹಂಪಿ ಕನ್ನಡ ವಿಶ್ವವಿದ್ಯಾಲಯಕ್ಕೆ ೨೦೦೯-೧೦ ನೇ ಸಾಲಿನ ಎಂ.ಫಿಲ್ ಪದವಿಗಾಗಿ **"ಎಂ.ವಿ.ಸೀ.ಯವರ ಸಣ್ಣಕತೆಗಳು: ಒಂದು ಅಧ್ಯಯನ"** ಎಂಬ ನಿಬಂಧವನ್ನು **ಡಾ.ಪಿ.ವಿ.ನಾರಾಯಣ** ಅವರ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿ ಸಲ್ಲಿಸುತ್ತಿದ್ದೇನೆ.

ಈ ನಿಬಂಧ ನನ್ನ ಸ್ವಂತ ಬರವಣಿಗೆಯಾಗಿದ್ದು ಇದರ ಯಾವುದೇ ಭಾಗವನ್ನು ಈವರೆಗೆ ಬೇರೆಲ್ಲೂ ಪ್ರಕಟಿಸಿಲ್ಲ ಮತ್ತು ಬೇರೆ ಯಾವುದೇ ಪದವಿಗಾಗಿ ಸಲ್ಲಿಸಿಲ್ಲ ಎಂದು ಈ ಮೂಲಕ ದೃಢೀಕರಿಸುತ್ತೇನೆ.

ದಿನಾಂಕ: ೦೮/೦೬/೨೦೧೦

ಸ್ಥಳ: ಬೆಂಗಳೂರು

ಸಂಶೋಧಕರು

Raghavendra

**(ಕೆ.ರಾಘವೇಂದ್ರಚಾರ್)**

# ಮಾರ್ಗದರ್ಶಕರ ಪ್ರಮಾಣ ಪತ್ರ

ಬಿ.ಎಂ.ಶ್ರೀ.ಸ್ಮಾರಕ ಪ್ರತಿಷ್ಠಾನ, ಬೆಂಗಳೂರಿನ ಎಂ.ವಿ.ಸೀ ಸ್ನಾತಕೋತ್ತರ ಸಂಶೋಧನಾ ಕೇಂದ್ರದ ಮೂಲಕ ಹಂಪಿ ಕನ್ನಡ ವಿಶ್ವವಿದ್ಯಾಲಯಕ್ಕೆ ೨೦೦೯-೧೦ ನೇ ಸಾಲಿನ ಎಂ.ಫಿಲ್ ಪದವಿಗಾಗಿ **"ಎಂ.ವಿ.ಸೀ.ಯವರ ಸಣ್ಣಕತೆಗಳು: ಒಂದು ಅಧ್ಯಯನ"** ಎಂಬ ನಿಬಂಧವನ್ನು **ಕೆ.ರಾಘವೇಂದ್ರಚಾರ್** ಅವರು ನನ್ನ ಮಾರ್ಗದರ್ಶನದಲ್ಲಿ ಸಿದ್ದಪಡಿಸಿದ್ದಾರೆ.

ಈ ನಿಬಂಧ ವಿದ್ಯಾರ್ಥಿಯ ಸ್ವಂತ ಬರವಣಿಗೆಯಾಗಿದ್ದು ಇದರ ಯಾವುದೇ ಭಾಗವನ್ನು ಈವರೆಗೆ ಬೇರೆಲ್ಲೂ ಪ್ರಕಟಿಸಿಲ್ಲ ಮತ್ತು ಬೇರೆ ಯಾವುದೇ ಪದವಿಗಾಗಿ ಸಲ್ಲಿಸಿಲ್ಲ ಎಂದು ಈ ಮೂಲಕ ದೃಢೀಕರಿಸುತ್ತೇನೆ.

ದಿನಾಂಕ: ೦೮.೦೯.೧೦

ಸ್ಥಳ: ಬೆಂಗಳೂರು

ಮಾರ್ಗದರ್ಶಕರು

(ಡಾ.ಪಿ.ವಿ.ನಾರಾಯಣ)

# ಪರಿವಿಡಿ

# ಅಧ್ಯಾಯ-೧

## ಅಧ್ಯಯನದ ಸ್ವರೂಪ, ಉದ್ದೇಶ ಮತ್ತು ವ್ಯಾಪ್ತಿ

ಪೀಠಿಕೆ;– ಆಧುನಿಕ ಕನ್ನಡ ಸಾಹಿತ್ಯದ ಗದ್ಯ ಪ್ರಕಾರದಲ್ಲಿ ಕಾದಂಬರಿ ಮೊದಲ ಸ್ಥಾನ ಪಡೆದರೆ ಅದರ ತರುವಾಯ ನಮಗೆ ಗೋಚರಿಸುವಂತದ್ದು ಸಣ್ಣಕತೆಗಳೇ ಆಗಿವೆ. ಹೊಸಗನ್ನಡ ಸಾಹಿತ್ಯದಲ್ಲಿ ಸಣ್ಣಕತೆಯು ಒಂದು ಜನಪ್ರಿಯ ಸಾಹಿತ್ಯ ಪ್ರಕಾರವಾಗಿದೆ. ಮನುಷ್ಯನಿಗೆ ಕಥೆಯ ಬಗ್ಗೆ ಕುತೂಹಲ ಒಂದು ಕಾರಣವಾದರೆ, ಸಣ್ಣಕತೆ ಕಾದಂಬರಿಯಂತೆ ಯುರೋಪ್ ಅದರಲ್ಲೂ ಇಂಗ್ಲೆಂಡಿನಿಂದ ಹೊಸದಾಗಿ ಬಂದ ಸಾಹಿತ್ಯ ಪ್ರಕಾರ ಎಂಬುದು ಮತ್ತೊಂದು ಕಾರಣವೆನ್ನಬಹುದು. ಸಣ್ಣಕತೆ ಕನ್ನಡ ಸಾಹಿತ್ಯದಲ್ಲಿ ಕಾಣಿಸಿಕೊಂಡಿದ್ದು ಇಂಗ್ಲಿಷ್ ಸಾಹಿತ್ಯದ ಪ್ರಭಾವದಿಂದ ಸಣ್ಣಕತೆ ಎಂಬ ಶಬ್ದಕ್ಕೆ ಇಂಗ್ಲಿಷಿನ 'Short Story' ಎಂಬುದರ ನೇರ ಭಾಷಾಂತರವಾಗಿದೆ. ಸಣ್ಣಕತೆಯು ಒಂದು ಪ್ರಸಂಗವನ್ನು ಹಲವು ನೆಲೆಗಳಲ್ಲಿ ಚಿಂತಿಸಿ ಚಿಕ್ಕದಾಗಿ ಸ್ವಾರಸ್ಯಕರವಾಗಿ ವಿಷಯ ಬಹುಬೇಗ ನಮ್ಮ ಮನಸ್ಸಿಗೆ ತಾಕುವಂತೆ ಮಾಡುತ್ತದೆ. ನಾವು ಹೊಸಗನ್ನಡ ಸಾಹಿತ್ಯದ ಆರಂಭದಲ್ಲಿ ಸಣ್ಣಕತೆಗಳನ್ನು ಗುರುತಿಸುತ್ತೇವೆ. ಸಣ್ಣಕತೆಗೆ ಭಾರತೀಯ ಪರಂಪರೆಯಲ್ಲಿ ಕೂಡ ನೆಲೆಯಿದೆ ಎಂಬುದನ್ನು ಮರೆಯಲಾಗದು.

ಆಧುನಿಕ ಸಣ್ಣಕತೆ ವಸ್ತು ಮತ್ತು ತಂತ್ರದ ದೃಷ್ಟಿಯಿಂದ ಇತರ ಗದ್ಯಗಳಿಗಿಂತ ಭಿನ್ನವಾಗಿದ್ದು, ಪಶ್ಚಿಮದ ನೇರ ಪ್ರಭಾವದಿಂದ ಜನಿಸಿದ ಸಾಹಿತ್ಯ ಪ್ರಕಾರವಾಗಿದೆ. ಓ ಹೆನ್ರಿ, ಲಿಯೋ ಟಾಲ್‌ಸ್ಟಾಯ್, ಆಂಟೆನ್, ಚಕಾವ್, ಸಾಮರ್‌ಸಟ್, ಎಡ್ಗರ್ ಅಲೆನ್ ಪೋ, ಮೊಪಾಸಾ ಮುಂತಾದವರನ್ನು ಮಾದರಿಯನ್ನಾಗಿ ಸ್ವೀಕರಿಸಿದ ಸಣ್ಣಕಥಾ ಪ್ರಕಾರ ತೀವ್ರಗತಿಯಲ್ಲಿ ಬೆಳೆಯಿತು.

ಪಾಶ್ಚಾತ್ಯರಲ್ಲಿ 'ಎಡ್ಗರ್ ಅಲೆನ್ ಪೋ' ಎಂಬುವವನು ಮೊಟ್ಟ ಮೊದಲಿಗೆ ಸಣ್ಣಕತೆಯನ್ನು ಬರೆದನು. ಆನಂತರ ನಮ್ಮ ಕನ್ನಡ ಸಾಹಿತ್ಯದಲ್ಲಿ ಕಾದಂಬರಿಯ ಕಲ್ಪನೆಯಿಂದ ಸಣ್ಣಕತೆ ಬೆಳೆದು ಬಂದಿರುವುದನ್ನು ಗುರುತಿಸಬಹುದು. ಕನ್ನಡದಲ್ಲಿ ಸಣ್ಣಕತೆಗಳನ್ನು ಮೊಟ್ಟ ಮೊದಲಿಗೆ ಬರೆದವರ ಬಗ್ಗೆ ಸಾಕಷ್ಟು ಜಿಜ್ಞಾಸೆಗಳಿವೆ. ಆದರೂ ಮೊದಲಿಗೆ ಸಣ್ಣಕತೆಗಳನ್ನು ಬರೆದವರೆಂದರೆ ಪಂಜೆಮಂಗೇಶರಾಯರು ಇವರ ಕಥೆಗಳೆಂದರೆ, ಭಾರತ ಶ್ರಾವಣೆ, ಕಮಲಾಪುರದ ಹೋಟ್ಲಲ್ಲಿ, ನಮ್ಮ ಚಿಕ್ಕತಾಯಿ, ನಮ್ಮ ಚಿಕ್ಕತಂದೆ ಮುಂತಾದ ಕತೆಗಳನ್ನು ಕ್ರಿ.ಶ, ೧೯೦೦ ರಲ್ಲಿ ಪ್ರಕಟಿಸಿದರು. ಈ ಕಥೆಗಳ ವಸ್ತು ಸಾಮಾಜಿಕ ಹಾಗೂ ಚಾರಿತ್ರಿಕ ಅಲ್ಲಿನ ಪಾತ್ರಗಳು ವೀರ ಮತ್ತು ಪ್ರೇಮಕ್ಕೆ ಆದರ್ಶ, ವೀರ ರಮಣೀಯರು ಕಾಣಿಸಿಕೊಳ್ಳುವ ಅವರ ಕಥೆಗಳಲ್ಲಿ ಹಾಸ್ಯಕ್ಕೆ ಪ್ರಧಾನತೆ, ಶೈಲಿ, ತೇಜಸ್ಸಿದೆ.

ನಂತರದ ಕಾಲದಲ್ಲಿ ಮಾಸ್ತಿಯವರು ಸಣ್ಣಕತೆಗಳಲ್ಲಿ ಹೆಚ್ಚು ಕೃಷಿಯನ್ನು ಮಾಡಿ "ಕನ್ನಡದ ಸಣ್ಣಕತೆಗಳ ಜನಕ" ರೆಂದು ಕರೆಸಿಕೊಂಡರು. ಇವರ ಕಥೆಗಳೆಂದರೆ ಮೊಸರಿನ ಮಂಗಮ್ಮ,

ವೆಂಕಟಿಗನ ಹೆಂಡತಿ, ಗೌತಮಿ ಹೇಳಿದ ಕತೆಗಳು ಪ್ರಸ್ತುತ. ಇವು ಆರಂಭದ ಕತೆಗಳಾಗಿದ್ದರೂ ಕತೆಗಳಲ್ಲಿ ಕಂಡುಬರುವ ಆಳವಾದ ತಿಳಿವು ಮತ್ತು ಜೀವನ ದೃಷ್ಟಿಗಳು ಇಂದಿಗೂ ಬೆರಗುಗೊಳಿಸು ವಂತಹವು. ಇವರ ಕಥೆಗಳ ವಸ್ತು, ತಂತ್ರ, ತಿಳಿಹಾಸ್ಯ, ಹಿರಿದಾದ ಜೀವನದೃಷ್ಟಿ ಸರಳ-ಸುಂದರ ಶೈಲಿ, ಅಚ್ಚಳಿಯದ ಪಾತ್ರಗಳು, ಸಣ್ಣಕಥಾ ಸಾಹಿತ್ಯ ಪ್ರಪಂಚದಲ್ಲಿ ವಿಶಿಷ್ಟವಾಗಿ ಉಳಿದಿದೆ. ಇಲ್ಲಿ ಸಣ್ಣಕತೆಗಳು ಭಾವಗೀತೆಗಳಂತೆ ತುಂಬಾ ಕೋಮಲ; ಭಾವುಕತೆಯ ಅತಿರೇಖ ಇರುವುದು ನವೋದಯ ಲಕ್ಷಣಗಳಲ್ಲಿ ಎದ್ದು ಕಾಣುತ್ತದೆ.

ಮಾಸ್ತಿಯವರ ಮಾರ್ಗದಲ್ಲಿ ಬಂದ ಪ್ರಮುಖ ಕಥೆಗಾರರೆಂದರೆ, ಆನಂದ(ಅಜ್ಜಂಪುರ ಸೀತಾರಾಂ) ಅಗ್ರಗಣ್ಯರು ನಂತರ ಕಂಡುಬರುವಂತಹವರು. ಭಾರತೀಪ್ರಿಯ (ಎಸ್.ವೆಂಕಟರಾವ್), ಸಿ.ಕೆ.ವೆಂಕಟರಾಮಯ್ಯ ಮತ್ತು ಇವರ ಕಾಲದಲ್ಲಿ ಬರುವಂತಹ ಪ್ರೋ.ಎಂ.ವಿ.ಸೀತಾರಾಮಯ್ಯ (ರಾಘವ) ಮೊದಲಾದವರು. ಎಂ.ವಿ.ಸೀಯವರು ನವೋದಯದ ೨ನೇ ಘಟ್ಟದಲ್ಲಿ ತಮ್ಮನ್ನು ಗುರುತಿಸಿಕೊಂಡವರು ಅವರ ಮೇಲೆ ನವೋದಯ ಸಾಹಿತ್ಯದ ಪ್ರಭಾವ ಆಗಿರುವಂತದ್ದು ವಸ್ತು, ಕಾಲ, ವಿಷಯ, ಪಾತ್ರದ ದೃಷ್ಟಿಯಿಂದ ಮಾಸ್ತಿಯವರ ಪ್ರಭಾವವಿದೆ.

ರಾಘವರ ಕಥೆಗಳ ಉದ್ದೇಶ ಬಹುಮಟ್ಟಿಗೆ ನವೋದಯ ಬರಹಗಾರರ ಪ್ರಮುಖ ಉದ್ದೇಶಗಳಲ್ಲಿ ಒಂದಾದ ಸಜ್ಜನಿಕೆಯ ದರ್ಶನ ಎನ್ನಬಹುದು. ಅವರ ಅನೇಕ ಕಥೆಗಳು ಒಂದು ಸ್ವಾರಸ್ಯಕರವಾದ ತಮಾಷೆಯ ಪ್ರಸಂಗವನ್ನು ನಿರೂಪಿಸುತ್ತವೆ. ಓದುವಾಗ ಸಂತೋಷ ಕೊಡುವುದೇ ಅವುಗಳ ಸಾರ್ಥಕ್ಯ ಅಲ್ಲದೇ ಅವರ ಕಥೆಗಳ ಉದ್ದೇಶ ಜೀವನದಲ್ಲಿರುವ ಕಷ್ಟಯಾತನೆಗಳತ್ತ ಗಮನ ಸೆಳೆಯುವುದು. ಹೀಗೆ ಮನಸ್ಸನ್ನು ಮೃದುಗೊಳಿಸುವುದು ನವೋದಯ ಸಾಹಿತ್ಯ ಮೀಮಾಂಸೆ ಈ ಶಕ್ತಿಯನ್ನು ಮುಖ್ಯ ಎಂದು ಪರಿಗಣಿಸಿತ್ತು. ಸ್ವಭಾವತಃ ಮನುಷ್ಯನಲ್ಲಿ ಸ್ವಾರ್ಥವಿರುತ್ತದೆ. ಇತರರತ್ತ ಅದನ್ನು ತಿರುಗಿಸಿ ಇತರರ ಕಷ್ಟ ಸುಖಗಳಲ್ಲಿ ಅವರನ್ನು ತಲ್ಲೀನಗೊಳಿಸಿ, ಮನುಷ್ಯ ಇತರರಲ್ಲಿ ಅನುಕಂಪ ತೋರುವಂತೆ ಮಾಡುತ್ತದೆ. ಇದು ನವೋದಯದ ವಿಚಾರದ ರೀತಿ. ದಿನ ಜೀವನ ನಡೆಸುವವರು ಎಷ್ಟೋ ಬಾರಿ ನಮಗೆ ಹರಿಯದಂತೆ ಕೆಂಡದ ಹಾದಿಯನ್ನು ತುಳಿಯುತ್ತಾರೆ ಎಂಬುದನ್ನು ಮನವರಿಕೆ ಮಾಡಿಕೊಡುವ ಅನೇಕ ಕಥೆಗಳನ್ನ ಎಂ.ವಿ.ಸೀಯವರು ಬರೆದಿದ್ದಾರೆ. ಇಂತಹ ಇವರ ಕಥೆಗಳನ್ನು ಶ್ರೇಷ್ಠ ಕೃತಿಗಳು ಎನ್ನಲಾಗದಿದ್ದರೂ, ಓದುವಾಗ ಸಂತೋಷವನ್ನು ಕೊಡುತ್ತವೆ ಎನ್ನುವುದು ನಿಜ.

**ಸ್ವರೂಪ:-**

ಕನ್ನಡ ಸಾಹಿತ್ಯದ ವಿವಿಧ ಪ್ರಕಾರಗಳಲ್ಲಿ ತಮ್ಮನ್ನು ತೊಡಗಿಸಿಕೊಂಡ ಎಂ.ವಿ.ಸೀ.ಯವರ ಹೆಸರು ಉಲ್ಲೇಖನೀಯವಾದದ್ದು. ಆದರೆ ಇವರು ಬರೆದಿರುವಂತಹ ಕೃತಿಗಳ ಬಗ್ಗೆ ಅಧ್ಯಯನಗಳು ನಡೆದಿಲ್ಲ. ಈ ಹಿನ್ನಲೆಯಲ್ಲಿ ಅವರ ಕೆಲವು ಸಣ್ಣ ಕತೆಗಳ ಸಂಕಲನದ ಅಧ್ಯಯನದ ಅವಶ್ಯಕತೆ ಇದೆ. ಅವರ ಸಾಹಿತ್ಯದ ಬಗೆಗಿನ ಆಸಕ್ತಿ ಈ ಅಧ್ಯಯನ ಕೈಗೊಳ್ಳಲು ಸಾಧ್ಯವಾಯಿತು.

ಎಂ.ವಿ.ಸೀ.ಯವರು ಸಾಹಿತ್ಯದ ವಿವಿಧ ಪ್ರಕಾರಗಳಲ್ಲಿ ತಮ್ಮದೇ ಆದ ಛಾಪು ಮೂಡಿಸಿದ್ದರೂ ಅವರ ಕಥಾ ಸಾಹಿತ್ಯದ ವಿಶಿಷ್ಟ ಸಾಧನೆಯನ್ನು ಈ ಅಧ್ಯಯನದಿಂದ ಗುರುತಿಸಬಹುದು. ಅವರ ಕತೆಗಳಲ್ಲಿ ಮಾಸ್ತಿಯವರ ಶೈಲಿಯನ್ನು ಅನುಸರಿಸಿದ್ದರೂ ಅವರಿಗಿಂತ ಭಿನ್ನವಾದ ಕೆಲವು ಜೀವನದ ಗಹನತೆಗಳನ್ನು ತೋರಿಸಿಕೊಟ್ಟರು. ಅವರು ಸಮಾಜದಲ್ಲಿ ಬೇರು ಬಿಟ್ಟಿದ್ದ ಜಾತಿಪದ್ಧತಿ, ಮೂಢನಂಬಿಕೆ, ಕಂದಾಚಾರಗಳನ್ನು ವಿರೊಧಿಸಿದರು. ಜೊತೆಗೆ ಅವರ ಕತೆಗಳಲ್ಲಿ ಮನುಷ್ಯ ಮನುಷ್ಯನಲ್ಲಿ ಅನುಕಂಪ, ಕರುಣೆ, ಪರಸ್ಪರ ಸಹಕಾರ ತೊರಿಸುವುದು ಮತ್ತು ನಮ್ಮ ಸಂಸ್ಕೃತಿಯನ್ನು ಮನವರಿಕೆ ಮಾಡಿಕೊಡುವುದು ಹಾಗೂ ಮೈಸೂರಿನ ಜನರ ಜೀವನ ಕ್ರಮವನ್ನು ಚಿತ್ರಿಸುವುದು ಅವರ ಕಥೆಗಳ ಸ್ವರೂಪ. ಆದ್ದರಿಂದ ಈ ೧೦ ಕಥಾ ಸಂಕಲನದಲ್ಲಿ ಕೆಲವು ನಿರ್ಧಿಷ್ಟ ಆಯ್ದ ಕಥೆಗಳನ್ನು ಕುರಿತು ಅಧ್ಯಯನದಲ್ಲಿ ತೊಡಗುವುದು ಇದರ ಸ್ವರೂಪವಾಗಿದೆ.

**ಉದ್ದೇಶ:-**

ಎಂ.ವಿ.ಸೀ.ಯವರು ಸಂಶೋಧಕರೆಂದೆ ಗುರುತಿಸಿಕೊಂಡಿದ್ದರೂ, ಸಾಹಿತ್ಯದ ನಾನಾ ಪ್ರಕಾರಗಳಲ್ಲಿ ತಮ್ಮ ಕೊಡುಗೆಯನ್ನು ಕನ್ನಡ ಸಾಹಿತ್ಯಕ್ಕೆ ಕೊಟ್ಟಿದ್ದಾರೆ. ಇವರ ಸಣ್ಣಕತೆಗಳ ಬಗ್ಗೆ ಇದುವರೆಗೂ ಯಾವುದೇ ರೀತಿಯ ಅಧ್ಯಯನಗಳು ನಡೆದಿಲ್ಲ. ಈ ಹಿನ್ನಲೆಯಲ್ಲಿ ಅವರು ಬರೆದಿರುವ ೧೦ ಕಥಾ ಸಂಕಲನಗಳಲ್ಲಿ ಕೆಲವು ಆಯ್ದ ಕಥೆಗಳ ಅಧ್ಯಯನದ ಅವಶ್ಯಕತೆ ಇರುವುದರಿಂದ ಮತ್ತು ಅವರ ಸಾಹಿತ್ಯದ ಬಗೆಗಿನ ಆಸಕ್ತಿ ಈ ಅಧ್ಯಯನ ಕೈಗೊಳ್ಳಲು ಸಾಧ್ಯವಾಯಿತು.

ಎಂ.ವಿ.ಸೀ.ಯವರು ಸಾಹಿತ್ಯದ ವಿವಿಧ ಪ್ರಕಾರಗಳಾದ ಕಥೆ, ಕಾದಂಬರಿ, ಭಾವಗೀತೆ, ಸಂಪಾದನೆ, ಸಂಶೋಧನೆ, ಚಿತ್ರಕಲೆ, ಸಂಗೀತ ಮುಂತಾದ ಪ್ರಕಾರಗಳಲ್ಲಿ ಸಾಕಷ್ಟು ಕೃಷಿ ಮಾಡಿದ್ದರೂ ಸಹ ಅವರ ಸಣ್ಣಕತೆಗಳಲ್ಲಿ ನನಗೆ ಇಷ್ಟವಾದ ಮತ್ತು ಬರವಣಿಗೆಗೆ ಅನುಕೂಲವಾಗುವಂತಹ ೩೦ ಕಥೆಗಳನ್ನು ಮಾತ್ರ ಆಯ್ದುಕೊಂಡಿದ್ದೇನೆ. ಈ ಕಥೆಗಳು ಯಾವ ಮಾದರಿಯನ್ನು ಅನುಸರಿಸುತ್ತಿವೆ? ಅವುಗಳ ಸ್ವರೂಪ ಮತ್ತು ವೈಶಿಷ್ಟ್ಯವೇನು? ಅವರ ಕಥೆಗಳ ವಸ್ತು, ಅವರ ಕಥೆಗಳ ತಂತ್ರ, ಶೈಲಿ ಮತ್ತು ಭಾಷೆ ಹಾಗೂ ಅವರು ಸಣ್ಣಕತೆಗಳಿಗೆ ಕೊಟ್ಟ ಕೊಡುಗೆಗಳು ಈ ರೀತಿಯಾಗಿ ಸಣ್ಣಕತೆಗಳನ್ನು ವಿಭಜಿಸಿ ವಿಷಯವನ್ನು ಅಧ್ಯಯನ ಮಾಡುವುದು ಪ್ರಸ್ತುತ ಪ್ರಬಂಧದ ಉದ್ದೇಶವಾಗಿದೆ.

**ವ್ಯಾಪ್ತಿ:-**

ಪ್ರಸ್ತುತ ಅಧ್ಯಯನವು " ಎಂ.ವಿ.ಸೀ.ಯವರ ಸಣ್ಣಕತೆಗಳು; ಒಂದು ಅಧ್ಯಯನ" ಎಂಬ ವಿಷಯವನ್ನು ಕುರಿತದ್ದಾಗಿದೆ. ಈ ವಿಷಯದಲ್ಲಿ ೭ ಅಧ್ಯಾಯನಗಳನ್ನಾಗಿ ಮಾಡಿಕೊಂಡು ಈ ಅಧ್ಯಯನದಲ್ಲಿ ತೊಡಗುತ್ತಿದ್ದೇನೆ. ಈ ಪ್ರಬಂಧದ ಮೊದಲನೆ ಅಧ್ಯಾಯನದಲ್ಲಿ ಅಧ್ಯಯನದ ಸ್ವರೂಪ, ಉದ್ದೇಶ ಮತ್ತು ವ್ಯಾಪ್ತಿಯನ್ನು ತಿಳಿಸಲಾಗಿದೆ. ೨ನೇ ಅಧ್ಯಾಯನದಲ್ಲಿ 'ನವೋದಯ

ಮತ್ತು ಸಣ್ಣಕತೆ'ಯಲ್ಲಿ ನವೋದಯದ ಪ್ರಮುಖ ಕಥೆಗಾರರು ಮತ್ತು ಎಂ.ವಿ.ಸೀ.ಯವರ ಬಗ್ಗೆ ವಿವರಿಸಲಾಗಿದೆ.

೩ನೇ ಅಧ್ಯಾಯನದಲ್ಲಿ ಸಣ್ಣಕತೆಗಳ ಸ್ವರೂಪ ಇದರಲ್ಲಿ ಸಣ್ಣಕತೆಗಳು ಯಾವ ಸ್ವರೂಪದಲ್ಲಿ ಚಿತ್ರಿಸಲಾಗಿದೆ ಎಂಬುದನ್ನು ತಿಳಿಸಲಾಗಿದೆ. ೪ನೇ ಅಧ್ಯಾಯನದಲ್ಲಿ ಸಣ್ಣಕತೆಗಳ ವಸ್ತು ಅಂದರೆ ಇದರಲ್ಲಿ ಸಾಮಾಜಿಕ ಪರಿಸರ, ಸಾಂಸಾರಿಕ ಜೀವನ, ಸ್ತ್ರೀಯರ ಚಿತ್ರಣ, ಧಾರ್ಮಿಕ ಪರಿಸರ, ವ್ಯಕ್ತಿಚಿತ್ರ ಪ್ರಧಾನ ಕತೆಗಳನ್ನು ತಿಳಿಸಲಾಗಿದೆ. ೫ನೇ ಅಧ್ಯಾಯನದಲ್ಲಿ ಅವರ ಕತೆಗಳ ತಂತ್ರ, ಶೈಲಿ ಮತ್ತು ಭಾಷೆಯ ವಿಶಿಷ್ಟತೆಗಳನ್ನು ವಿವರಿಸಲಾಗಿದೆ. ೬ನೇ ಅಧ್ಯಾಯನದಲ್ಲಿ ಎಂ.ವಿ.ಸೀ.ಯವರು ಸಣ್ಣಕತೆಗಳ ಕ್ಷೇತ್ರಕ್ಕೆ ಕೊಟ್ಟ ಕೊಡುಗೆಗಳು, ಅದರಲ್ಲಿ ಸಮಾಜದ ನಾನಾ ರೀತಿಯ ಸಮಸ್ಯೆಗಳನ್ನು ಚಿತ್ರಿಸಿದ್ದಾರೆ ಎಂಬುದನ್ನು ತಿಳಿಸಲಾಗಿದೆ. ೭ನೇ ಅಧ್ಯಾಯನದಲ್ಲಿ ಈ ಅಧ್ಯಾಯನದಿಂದ ಕಂಡುಕೊಂಡ ಅಂಶಗಳನ್ನು ಹೇಳಲಾಗಿದೆ ಮತ್ತು ಎಂ.ವಿ.ಸೀ.ಯವರ ಜೀವನ–ಸಾಧನೆಯನ್ನು ತಿಳಿಸಲಾಗಿದೆ. ಅನುಬಂಧದಲ್ಲಿ ಎಂ.ವಿ.ಸೀ.ಯವರ ಕೃತಿಸೂಚಿ, ಆಕರ ಸಣ್ಣಕತೆಗಳು ಮತ್ತು ಗ್ರಂಥಋಣವನ್ನು ನೀಡಲಾಗಿದೆ.

* * * * *

## ಅಧ್ಯಾಯ-೨

### ನವೋದಯ ಮತ್ತು ಸಣ್ಣಕತೆ

ಕಥೆಯ ಹುಟ್ಟಿನ ಗುಟ್ಟು ಹೊಡೆಯುವುದು ಸುಲಭ ಸಾಧ್ಯವಲ್ಲ. ಅದಕ್ಕೆ ಸಾಕ್ಷಿ ಪುರಾವೆಗಳು ಕಲ್ಪಿಸಿಕೊಳ್ಳಬೇಕೆ ಹೊರತು ದಾಖಲೆಗಳು ದೊರೆಯುವುದಿಲ್ಲ. ಬಹುಶಃ ಮನುಷ್ಯನ ನಾಗರೀಕತೆಯ ಆರಂಭವೇ ಕಥೆಯ ಆರಂಭವೆಂದು ಹೇಳಬಹುದೇನೋ, ಆದಿಮ ಕಾಲದಲ್ಲಿ ಮನುಷ್ಯ ಇತರ ಪ್ರಾಣಿಗಳಂತೆ ಅಲೆಮಾರಿಯಾಗಿದ್ದಾಗ ಹೇಳುವ ಕೇಳುವ ಪ್ರಕ್ರಿಯೆಯಿರಲಿಲ್ಲ. ಮಾತು ಮನುಷ್ಯನಿಗೆ ಎಲ್ಲವನ್ನೂ ಕಲಿಸಿತು. ಕಥೆಗೆ ಮಾತೆ ಮೂಲ. ತನ್ನ ನೋವು ನಲಿವುಗಳನ್ನು ತೋಡಿಕೊಂಡಂತೆ ತನ್ನ ಅನುಭವವನ್ನು ಕಥೆಯಾಗಿಸತೊಡಗಿದ. ಭೇಟೆಯ ಅನುಭವ, ಬೇರೆ ಗುಂಪಿನ ಜೊತೆಗೆ ತಾನು ಹೊಡೆದಾಡಿದ್ದನ್ನು ಕ್ರಮಬದ್ಧವಾಗಿ ಹೇಳುವ ತವಕ ಮತ್ತು ಕೇಳುವ ಕುತೂಹಲಗಳು ಕಥನ ಕಲೆಗೆ ಜನ್ಮ ನೀಡಿದಂತೆ ತೋರುತ್ತದೆ. ಹೀಗೆ ಪ್ರಾಗೈತಿಹಾಸಿಕ ಕಾಲದಲ್ಲಿಯೇ ಕಥೆ ಉಗಮಿಸಿ ಸಂಸ್ಕೃತಿ ನಾಗರೀಕತೆಗಳ ಜೊತೆಗೆ ಬೆಳೆದು ಮೌಖಿಕ ಪರಂಪರೆಯಲ್ಲಿ ಉಳಿದುಕೊಂಡು ಈಗ ಸಂಕೀರ್ಣವಾದ ಅಭಿವ್ಯಕ್ತಿಯ ಮಾಧ್ಯಮವಾಗಿ ಬೆಳೆದು ನಿಂತಿದೆ.

ಈಗ ಕನ್ನಡದಲ್ಲಿ ಆಧುನಿಕ ಸಣ್ಣಕಥೆಯ ಪ್ರಕಾರಕ್ಕೆ ನೂರು ವರ್ಷಗಳು ತುಂಬಿವೆ. ಸಾಮಾನ್ಯವಾಗಿ ಭಾರತದಲ್ಲಿ ಕಥೆಯ ಉಗಮ ವೇದಕಾಲದಿಂದಲೂ ಗುರುತಿಸುವ ಪ್ರಯತ್ನ ಮಾಡುತ್ತಾರೆ. ಐತರೇಯ ಬ್ರಾಹ್ಮಣದ "ಹರಿಶ್ಚಂದ್ರ ಕಥೆ" ಉಪನಿಷತ್ತಿನ ನಚಿಕೇತೋ ವ್ಯಾಖ್ಯಾನ ಇವು ಪ್ರಸಿದ್ದ ಕಥೆಗಳು, ಬೃಹತ್ಕಥೆ ಮತ್ತು ಪಂಚತಂತ್ರಗಳು ಜನಪ್ರಿಯ ಕಥಾಸಂಕಲನಗಳಾಗಿವೆ. ಇದಕ್ಕೂ ಮೊದಲು ಜನಪದ ಕಥೆಗಳು ಮೌಖಿಕ ಪರಂಪರೆಯಲ್ಲಿದ್ದವು. ಹಾಗೆ ನೋಡಿದರೆ ಜನಪದ ಕಥೆಗಳೇ ಸಣ್ಣಕತೆಗೆ ಮೂಲ.

ಕನ್ನಡದಲ್ಲಿ ಕಥನ ಪರಂಪರೆಗೆ ಸಾವಿರ ವರ್ಷದ ಇತಿಹಾಸವಿದೆ. ಶಿವಕೋಟ್ಯಾಚಾರ್ಯನ 'ವಡ್ಡಾರಾಧನೆ' ಕನ್ನಡದ ಪ್ರಥಮ ಕಥಾಸಂಗ್ರಹವೆಂದು ಹೇಳಬಹುದು. ಕಥೆಯ ಇತಿಹಾಸದ ದೃಷ್ಟಿಯಿಂದ ಇದು ಮಹತ್ವದ ಕೃತಿ. ಆನಂತರ ಕಥಾ ಸಂಗ್ರಹಗಳ ಪರಂಪರೆಯೆ ಮುಂದುವರೆಯುತ್ತದೆ. ಚಾವುಂಡರಾಯನ 'ತ್ರಿಷಷ್ಠಿ' 'ಲಕ್ಷ್ಮಣ ಮಹಾಪುರಾಣ', ದುರ್ಗಸಿಂಹನ 'ಪಂಚತಂತ್ರ', ನಯಸೇನನ 'ಧರ್ಮಾಮೃತ', ಬ್ರಹ್ಮಶಿವನ 'ಸಮಯಪರೀಕ್ಷೆ', ನಾಗರಾಜನ 'ಪುಣ್ಯ ಸ್ರವ', ವೃತ್ತವಿಲಾಸನ 'ಧರ್ಮಪರೀಕ್ಷೆ', ಚೌಂಡರಸನ 'ಅಭಿನವ ದಶಕುಮಾರ ಚರಿತೆ', ದೇವರಾಜನ 'ಸೊಬಗಿನ ಸೇನೆ', ಲಕ್ಕಣ್ಣ ದಂಡೇಶನ 'ಶಿವತತ್ವ ಚಿಂತಾಮಣಿ', ಬೊಮ್ಮರಸನ 'ಸೌಂದರ್ಯ ಪುರಾಣ', ಸುರಂಗನ 'ತ್ರಿಷಷ್ಠಿ' ಪುರಾತನರ ಚರಿತ್ರೆ, ನೀಲಕಂಠಾಚಾರ್ಯನ 'ಆರಾಧ್ಯ ಚರಿತ್ರೆ' ಮುಂತಾದ ಕೃತಿಗಳನ್ನು ಉಲ್ಲೇಖಿಸಬಹುದು. ಕಥಾ ಪರಂಪರೆಯ ದೃಷ್ಟಿಯಿಂದ ಇವು ಗಮನಾರ್ಹವಾದ ಗ್ರಂಥಗಳು. ಹಳಗನ್ನಡ ಸಾಹಿತ್ಯದ ಈ ಗ್ರಂಥದಲ್ಲಿನ ಕಥೆಗಳು ಉದ್ದೇಶ ಧರ್ಮಪ್ರಚಾರ, ನೀತಿ ಭೋಧನೆ, ಮನೋರಂಜನೆಯಾಗಿತ್ತು.

ಕಥನ ಸಾಹಿತ್ಯ ಜಗತ್ತಿನ ಎಲ್ಲಾ ಸಂಸ್ಕೃತಿಗಳಲ್ಲಿ ಒಂದೇ ರೀತಿಯಾಗಿ ಬೆಳೆದು ಬಂದಿದೆಯೆಂದು ಹೇಳಲಾಗುವುದಿಲ್ಲ. ಈ ಕುರಿತು ಭಿನ್ನಾಭಿಪ್ರಾಯಗಳಿವೆ. ಸ್ಪ್ಯಾನಿಶರು ಕಥೆಗಳನ್ನು ಅಪಾರವಾಗಿ ಪ್ರೀತಿಸಿದರೆ ಫ್ರೆಂಚರು ಕಾದಂಬರಿಯಲ್ಲಿ ಹೆಚ್ಚು ಆಸಕ್ತಿ ತಾಳುತ್ತಾರೆ. ಇಸ್ಲಾಮಿಕ್ ಜಗತ್ತು ಪರ್ಯಾಯವಾದ ಒಂದು ಕಾಲ್ಪನಿಕ ಜಗತ್ತನ್ನು ವಿರೋಧಿಸುತ್ತದೆಂದು ಎಡ್ವರ್ಡ್ ಸೈದ್ ಹೇಳುತ್ತಾರೆ. ಆದರೆ ಭಾರತೀಯರು ಕಥನ ಕಲೆಯನ್ನು ಅಪಾರವಾಗಿ ಪ್ರೀತಿಸುತ್ತಾರೆ.

ಸಣ್ಣಕಥೆಯ ರೂಪು ರೇಖೆಗಳನ್ನೂ ನೀತಿ ನಿಯಮಗಳನ್ನು ಸ್ಪಷ್ಟವಾಗಿ ನಿರ್ದೇಶಿಸಿ ಸಾಹಿತ್ಯದ ಈ ಪ್ರಕಾರಕ್ಕೆ ಶಾಸ್ತ್ರೀಯ ಸಂಸ್ಕಾರದ ಪುಟವಿಡಲು ಪ್ರಯತ್ನ ಪಟ್ಟವರಲ್ಲಿ ಅಮೇರಿಕಾದ 'ಎಡ್ಗರ್ ಅಲೆನ್ ಪೋ' ಮೊದಲಿಗ. ಕಲೆಯ ಮುದ್ರೆ ಬೀಳದೆ ಸಣ್ಣಕತೆ ಬೆಳೆಯಲಾರದು. ಕಥೆಯಲ್ಲಿ ಕ್ರಿಯೆಯ ಐಕ್ಯತೆ ಇರಬೇಕು. ಕಥೆಯ ಪರಿಣಾಮ ನಿರ್ದಿಷ್ಟವಾಗಿದ್ದು ಒಮ್ಮುಖವಾಗಿರಬೇಕು ಎಂದು ಪೋ ಹೇಳಿದ. ಅವನ ಮೊದಲ ಕಥೆ 'ಎ ಮ್ಯಾನು ಸ್ಕ್ರಿಪ್ಟ್ ಫೌಂಡ್ ಇನ್ ಎ ಬಾಟಲ್' ಪ್ರಕಟವಾದದ್ದು ೧೮೩೩ ರಲ್ಲಿ. ಸಣ್ಣಕಥೆ ಎಂದು ಜನ್ಮ ಆದದ್ದು ಆಗಲೇ ಎಂದು ಹೇಳಬಹುದು. ಪೋನ ಕಾಲದಿಂದ ಈಚೆಗೆ ಸಣ್ಣಕತೆ ತುಂಬಾ ಅಭಿವೃದ್ಧಿ ಹೊಂದಿದೆ.

ಸಣ್ಣಕಥೆ ಎಂದರೇನು? ಅದನ್ನು ಒಂದು ಸಾಹಿತ್ಯ ಪ್ರಕಾರವಾಗಿ ಪರಿಗಣಿಸಬೇಕೆ? ಎಷ್ಟು ಸಣ್ಣದಿರಬೇಕು ಮತ್ತು ಅದರ ಸ್ವರೂಪ ಲಕ್ಷಣಗಳನ್ನು ಕುರಿತು ಅನೇಕ ಭಿನ್ನಾಭಿಪ್ರಾಯಗಳಿದ್ದವು. ಈಗ ಆಧುನಿಕ ಸಣ್ಣಕತೆಯನ್ನು ಒಂದು ಸಾಹಿತ್ಯ ಪ್ರಕಾರವಾಗಿ ಪರಿಗಣಿಸಿದ್ದಾರೆ. ಸಣ್ಣಕತೆ ಸಣ್ಣದಿರಬೇಕು, ಎಷ್ಟೆಂದರೆ ಕ್ಷಣದಲ್ಲಿ ಓದಿ ಮುಗಿಸುವಂತಿರಬೇಕು. 'ಸಣ್ಣತನವೇ' ಅದರ ದೊಡ್ಡ ಲಕ್ಷಣ ಶಕ್ಯವಿದ್ದಷ್ಟು ಕಡಿಮೆ ಪಾತ್ರಗಳು, ಕುತೂಹಲ ಕೆಡದ ಪರಿಣಾಮಕಾರಿಯಾದ ಅಭಿವ್ಯಕ್ತಿ, ಸ್ಪಷ್ಟತೆ ಮತ್ತು ತೀವ್ರತೆಯನ್ನು ಅದರ ಸಣ್ಣತನ ನಿಯಂತ್ರಿಸುವಂತಿರಬೇಕು. ಸಣ್ಣಕತೆಯ ಸಣ್ಣತನವೇ ಅದರ ಎಲ್ಲಾ ಘಟಕಗಳ ಸ್ವರೂಪವನ್ನು ನಿರ್ಧರಿಸುತ್ತದೆಯಾದ್ದರಿಂದ ಅದೇ ಅದನ್ನು ಉಳಿದ ಪ್ರಕಾರಗಳಿಂದ ಬೇರ್ಪಡಿಸುತ್ತದೆ ಎಂದು ಸುಜಾನ್ ಪರ್ಗಿಸನ್ನಳು ಹೇಳಿದರೆ, ಈ ಸಣ್ಣತನವೇ ಅದರ ಕ್ರಿಯೆ, ಅಂಗ, ದೃಷ್ಟಿಕೋನವನ್ನು ನಿಯಂತ್ರಿಸುತ್ತದೆಂದು ಫ್ರೀಡ್‌ಮನ್ ಹೇಳಿದ ಮಾತುಗಳು ಗಮನಾರ್ಹವಾಗಿವೆ.

**ಸಣ್ಣಕಥೆಯ ಅರ್ಥ**

ಕಥನ ಪರಂಪರೆಯ ಪ್ರಕಾರಗಳಲ್ಲಿ ಸಣ್ಣಕತೆಯು ಒಂದು. ಇದು ಇಂಗ್ಲೀಷಿನ ಶಾರ್ಟ್ ಸ್ಟೋರಿ' ಎಂಬ ಪದಕ್ಕೆ ಸಂವಾದಿಯಾಗಿ ಕನ್ನಡದಲ್ಲಿ 'ಸಣ್ಣಕಥೆ' ಎಂಬ ಪದವನ್ನು ಬಳಸುತ್ತೀದ್ದೇವೆ. ಈ ಹೆಸರಿನ ಜೊತೆಗೆ ಇದಕ್ಕೆ ಪ್ರೇರಣೆಯು ಪಶ್ಚಿಮದಿಂದ ಹರಿದುಬಂದಿದೆ ಎಂಬುದನ್ನು ಯಾರೂ ಅಲ್ಲಗಳೆಯಲಾರರು.

ಸಣ್ಣಕತೆ ಎಂದರೇನು? ಎನ್ನುವುದಕ್ಕೆ ಅನೇಕ ವಿದ್ವಾಂಸರು ಅನೇಕ ರೀತಿಯಲ್ಲಿ ವ್ಯಾಖ್ಯಾನವನ್ನು ನೀಡಿದ್ದಾರೆ.

➢ ಎಡ್ಗರ್ ಅಲೆನ್ ಪೋ ರವರು ಹೇಳುವಂತೆ– 'ಸಣ್ಣಕತೆ ಓದಿ ಮುಗಿಸಲು ಅರ್ಧ ಗಂಟೆಯಿಂದ ಹಿಡಿದು ಒಂದು ಅಥವಾ ಎರಡು ಗಂಟೆಗಳು ಬೇಕಾಗುವ ಗದ್ಯಕಥನ' ಎಂದಿದ್ದಾರೆ.

➢ ಮಾರ್ಡನ್ ಶಾರ್ಟ್ ಸ್ಟೋರಿ ಎಂಬ ಇಂಗ್ಲೀಷ್ ಸಣ್ಣಕತೆಗಳ ಸಂಕಲನವೊಂದರ ಸಂಪಾದಕನ ಉದ್ಗಾರವಿದು– 'ಸಣ್ಣಕತೆ ಕಥೆಯಾಗಿರಬೇಕು, ಅದು ಸಣ್ಣದಾಗಿಯೂ ಇರಬೇಕು, ಎಂದಿದ್ದಾರೆ.

➢ ಎಂ.ಹೆಚ್.ಅಬ್ರಾಮ್ಸ್ ರವರು ಹೇಳುವಂತೆ– 'ಗದ್ಯದಲ್ಲಿರುವ ಕಥವನೇ ಸಣ್ಣಕಥೆ' ಎನ್ನುತ್ತಾರೆ.

➢ ಮಾಸ್ತಿ ರವರ ಪ್ರಕಾರ– 'ಜೀವನದ ವಾಸ್ತವದ ಹಾಗೇಯೇ ರಸವತ್ತಾದ ಚಿತ್ರಗಳನ್ನು ಕೊಡುವುದಷ್ಟೆ ನನ್ನ ಕೆಲಸ' ಎಂದಿದ್ದಾರೆ.

➢ ಕುವೆಂಪು ರವರ ಪ್ರಕಾರ– 'ಸಣ್ಣಕತೆ ಸಾವಿನ ಸುದ್ದಿಯನ್ನು ತೆಗೆದುಕೊಂಡು ಹೋಗುವ ಹಾಗೆ' ಎಂದಿದ್ದಾರೆ.

➢ ಶಾಂತಿನಾಥ ದೇಸಾಯಿ ರವರ ಪ್ರಕಾರ– 'ಕಾವ್ಯ ಹೇಳಿಕೇಳಿ ಒಳಧ್ವನಿಯ ಹೊರ ಅಭಿವ್ಯಕ್ತಿ, ಸಣ್ಣಕಥೆ ಹೊರ ಜಗತ್ತಿನ ಒಳ ಅಭಿವ್ಯಕ್ತಿ' ಎಂದಿದ್ದಾರೆ.

➢ ಡಾ. ಅನುಪಮ ನಿರಂಜನ ರವರ ಪ್ರಕಾರ– 'ಜೀವನದ ಅನುಭವವನ್ನು ಭಾವನೆಯಿಂದ ಗ್ರಹಿಸಿ ಭಾಷೆಯ ಮಾಧ್ಯಮವನ್ನು ಬಳಸಿಕೊಂಡು ಬುದ್ಧಿಯ ಮೂಲಕ ಆ ಜಗತ್ತನ್ನು ಪುನಃ ಸೃಷ್ಟಿಸುವುದೇ ಕಥೆ' ಎಂದು ಹೇಳಿದ್ದಾರೆ.

ಸಣ್ಣಕತೆ ಎಂಬುದು ಒಂದೇ ಸಲಕ್ಕೆ ಸುಲಭವಾಗಿ ಓದಿ ಮುಗಿಸಬಹುದಾದನ್ನು ಕಥೆ ಎನ್ನಬಹುದು.

"ಸಣ್ಣಕತೆಗೆ ಆರಂಭವಿದೆ (ಕಥಾವಸ್ತು ಬೆಳೆಯುವ) ಮಧ್ಯಭಾಗವಿದೆ. ವಸ್ತುವಿಗೆ ಸಿಕ್ಕ ತೊಡಕುಗಳನ್ನು ಬಿಡಿಸುವ ಮುಕ್ತಾಯವಿರುತ್ತದೆ" ೧

ಸಣ್ಣಕತೆ ಸ್ವರೂಪವನ್ನು ವಿವರಿಸಲು 'ಪರಿಣಾಮ ರಮಣೀಯತೆ' ಎಂಬ ಮಾತುಗಳನ್ನು ಬಳಸಬಹುದಾಗಿದೆ. ಸಣ್ಣಕತೆಗೆ ವಿದ್ವಾಂಸರು ಗುರುತಿಸುವ ಎರಡು ಮುಖ್ಯ ಲಕ್ಷಣ ಭಾವ ತೀವ್ರತೆ ಮತ್ತು ಸಂಕ್ಷಿಪ್ತತೆ.

ಸಣ್ಣಕತೆ ಎಂದರೆ ಸಾಮಾಜಿಕವಾಗಿ, ಪ್ರಾಕೃತಿಕವಾಗಿ ಕಂಡುಕೇಳಿರುವ ಸಂಗತಿಗಳನ್ನು ನವಿರಾಗಿ, ಸರಳವಾಗಿ, ಕೊಂಚವಾಗಿ, ನಮ್ಮ ಮುಂದಿಡುವ ಸಾಹಿತ್ಯ ಪ್ರಕಾರವೇ ಸಣ್ಣಕತೆಯಾಗಿದೆ.

ಕಥೆ ಭಾಷೆಯ ಮೂಲಕ ವಿಷಯವನ್ನು ಹಿಡಿದಿಡುವುದು ಕಥೆಯ ಮೂಲ 'ಘಟನೆ'ಯಲ್ಲಿದೆ. ಮೀಕ್ ಬಾಲಳ ಪ್ರಕಾರ ಘಟನೆಯೆಂದರೆ "ವ್ಯಕ್ತಿಗಳಿಂದ ಘಟಿಸಿದ ಅಥವಾ ಅವನು ಅನುಭವಿಸಿದ ಒಂದು ಅವಸ್ಥೆಯಿಂದ ಇನ್ನೊಂದು ಅವಸ್ಥೆಗೆ ಸ್ಥಿತ್ಯಂತರ"

ರಿಫ್ಯಾಟರ್ ಎಂಬ ವಿದ್ವಾಂಸ ಕಥೆಯ ಬಗ್ಗೆ ಕೊಡುವ ವ್ಯಾಖ್ಯೆ ಹೀಗಿದೆ. ಕಥೆಯೆಂದರೆ ಕಥನಾ ಸಂದರ್ಭಿಸುವ ದೇಶ ಕಾಲಗಳ ಪ್ರತಿರೂಪಣ ಮತ್ತು ಘಟನೆ ಹಾಗೂ ಪಾತ್ರಗಳ ಭಾಷಿಕ ಪ್ರತಿರೂಪ" ೨

ಸಣ್ಣಕತೆ ದೀರ್ಘವಲ್ಲದ್ದು, ಕಥೆಗೆ ಮಿತಿ ಇರುತ್ತದೆ. ಒಂದು ಕಾಲ, ಸಂದರ್ಭವನ್ನು ಅವಲಂಬಿಸಿರುತ್ತದೆ. ಗಾತ್ರದಲ್ಲಿ ಚಿಕ್ಕದು. ಕಥೆಗಾರರು ಹೇಳುವ ವಿಚಾರವನ್ನು ಚಿಕ್ಕದಾಗಿಯೇ ಹೇಳಿ ಮುಗಿಸಿಬಿಡಬೇಕಾಗುತ್ತದೆ. ಹಾಗಾಗಿ ಕಥನ ಕೌಶಲ, ಚಾತುರ್ಯ ಕಥೆಗಾರರಿಗೆ ಇರಬೇಕು. ಕಾದಂಬರಿಗೆ ಹೋಲಿಸಿದರೆ ಸಣ್ಣಕತೆಯಲ್ಲಿ ಕ್ರಿಯೆ ಸೀಮೀತವಾಗಿರುತ್ತದೆ. ಸಣ್ಣಕತೆ ಸೀಮಿತವಾಗಿರುವುದರಿಂದ ಕಥೆಗಾರ ಅದರ ಆಳಕ್ಕೆ ಇಳಿಯುವಯುದು ಅವಶ್ಯಕವಾಗಿರುತ್ತದೆ.

ಕನ್ನಡದಲ್ಲಿ 'ವಡ್ಡಾರಾಧನೆ' ಯಿಂದ ಮೊದಲಾಗಿ ಚಾವುಂಡರಾಯ ಪುರಾಣಂ ಎಂದು ಹೆಸರಾದ ತ್ರಿಷಷ್ಠಿ ಶಲಾಕ ಪ್ರತಿಬದ್ಧ ಪುರಾಣಂ, ದುರ್ಗಸಿಂಹನ ಪಂಚತಂತ್ರ, ನಯಸೇನನ ಧರ್ಮಾಮೃತ, ಶಾಂತಲಿಂಗ ದೇಶಿಕನ ಭೈರವೇಶ್ವರ ಕಾವ್ಯದ ಕಥಾಮಣಿ, ಸೂತ್ರ ರತ್ನಾಕರ ಮೊದಲಾದ ಕೃತಿಗಳು ಬೆಳೆದು ಬಂದಿರುವ ಶಿಷ್ಪ ಕಥಾ ಪರಂಪರೆಯಿದೆ. ಕನ್ನಡದಲ್ಲಿ ಜಾನಪದ ಕಥೆಗಳ ಶ್ರೀಮಂತ ಭಂಡಾರವೂ ಇದೆ.

ಸಣ್ಣಕತೆಗೆ ಒಂದು ಸ್ವರೂಪವನ್ನು ಆಧುನಿಕ ಸಣ್ಣಕತೆಗಳಲ್ಲಿ ಕಾಣಬಹುದು. ಕನ್ನಡದಲ್ಲಿ ಕಾದಂಬರಿಯ ತರುವಾಯ ಸಣ್ಣಕತೆಯೇ ಅತ್ಯಂತ ಜನಪ್ರಿಯವಾದ ರೂಪವಾಗಿದೆ. ಆಧುನಿಕ ಸಣ್ಣಕತೆಯು ವಿಶಿಷ್ಟವಾದ ಸಾಹಿತ್ಯ ಪ್ರಕಾರವಾಗಿ ಕನ್ನಡದಲ್ಲಿ ಮೂಡಿಬಂದದ್ದು ಪಾಶ್ಚಿಮಾತ್ಯ ಸಾಹಿತ್ಯದ ಪ್ರಭಾವ ಮತ್ತು ಪ್ರೇರಣೆಯಿಂದ ಎಂದು ಹೇಳಬಹುದು. ಆದರೆ ಇಲ್ಲಿಯ ಮಣ್ಣಿನ ಸತ್ವ, ಸಂಸ್ಕೃತಿ, ತನ್ನ ತನವನ್ನು ಮೈಗೂಡಿಸಿಕೊಂಡು ಅದು ಸಮೃದ್ದಿಯಾಗಿ ಬೆಳೆಯಿತು.

**ಕಥಾಸಾಹಿತ್ಯ ನಡೆದುಬಂದ ದಾರಿ**

ಕನ್ನಡ ಸಾಹಿತ್ಯದಲ್ಲಿ ಭಾವಗೀತೆಯ ಜೊತೆಗೆ ಕಾಣಿಸಿಕೊಂಡಿದ್ದು ಸಣ್ಣಕಥೆಯಾಗಿದೆ. ಸಣ್ಣಕತೆಗೆ ತನ್ನದೇ ಆದ ಒಂದು ವಿಶಿಷ್ಟವಾದ ಬೆಳವಣಿಕಗೆ ಇದೆ. ಅಲ್ಲದೇ ಪಾಶ್ಚಾತ್ಯ ಸಾಹಿತ್ಯ ಲೇಖಕ 'ಎಡ್ಗರ್ ಅಲೆನ್ ಪೋ' ನಿಂದ ಆರಂಭವಾದ ಕಥಾ ಸಾಹಿತ್ಯ ನಮ್ಮ ಕನ್ನಡ ಸಾಹಿತ್ಯದ ಮೇಲೆ ಪ್ರಭಾವಬೀರಿ ಹೊಸಗನ್ನಡ ಸಾಹಿತ್ಯದಲ್ಲಿ ಸಣ್ಣಕತೆಗಳನ್ನು ಬರೆಯಲು ಪ್ರಾರಂಭಿಸಿದರು. ಇಲ್ಲಿ ನಾವು ನವೋದಯ ಪೂರ್ವ ಮತ್ತು ನವೋದಯ ಕಾಲದ ಕಥೆಗಾರರನ್ನು ಕುರಿತು ಚರ್ಚಿಸಲಾಗುತ್ತದೆ. ಇವುಗಳನ್ನು ಗಮನಿಸಿದಾಗ ಕಥೆಗಳು ಆಯಾ ಕಾಲಘಟ್ಟದಲ್ಲಿನ ಪರಿಸರ, ಸನ್ನಿವೇಶ, ಸಂದರ್ಭ ಇವುಗಳ ಪ್ರೇರಣೆಯಿಂದ ಮೂಡಿಬಂದವು ಎಂದು ಸ್ಪಷ್ಟವಾಗಿ ಗೋಚರಿಸುತ್ತದೆ.

**ನವೋದಯ ಪೂರ್ವ**

ಆಂಗ್ಲರು ಮತ್ತು ಅವರ ಸಾಹಿತ್ಯದ ಸಂಪರ್ಕದಿಂದ ಭಾರತೀಯರು–ಭಾರತೀಯ ಸಾಹಿತ್ಯದ ಮೇಲೆ ಹಲವು ಪ್ರಮುಖ ಪರಿಣಾಮಗಳು ಉಂಟಾಗಿವೆ. ಸಣ್ಣಕತೆಯ ಸಾಹಿತ್ಯ ರೂಪ, ಆಂಗ್ಲರ ಸಂಪರ್ಕದ ಫಲ. ಸಣ್ಣಕತೆ ನಮ್ಮ ದೇಶಕ್ಕೆ ಬಂದದ್ದು ಪಶ್ಚಿಮ ರಾಷ್ಟ್ರಗಳಿಂದ ಮೊದಲು ಬಂಗಾಳಕ್ಕೆ ಬಂದ ಸಣ್ಣಕತೆ ಕ್ರಮೇಣ ದೇಶಾದ್ಯಂತ ಹರಡಿತು. ಕನ್ನಡಕ್ಕೂ ಬಂದಿತು. ಬೇಗ ಜನಪ್ರಿಯವು ಆಯಿತು. ೧೯೨೦ ರಲ್ಲಿ ಶ್ರೀನಿವಾಸರ 'ಕೆಲವು ಸಣ್ಣಕತೆಗಳು' ಪ್ರಕಟವಾಯಿತು.

ಹೊಸಗನ್ನಡ ಕಥಾ ಸಾಹಿತ್ಯ ಮಾಸ್ತಿ ಯವರಿಂದ ಒಂದು ನಿರ್ದಿಷ್ಟ ರೂಪು–ರೇಷೆಗಳನ್ನು ಪಡೆದರೂ ಅದಕ್ಕಿಂತ ಮುಂಚೆ ಪಂಜೆ ಮಂಗೇಶರಾಯರು, ಕೆರೂರುವಾಸುದೇವಾಚಾರ್ಯರು, ಎಂ.ಎನ್.ಕಾಮತ್‌ರವರು ಕಥಾಸಾಹಿತ್ಯಕ್ಕೆ ಪ್ರಥಮವಾಗಿ ಕಾಣಿಕೆಯನ್ನು ನೀಡಿದ್ದಾರೆ. ಪಂಜೇ ಮಂಗೇಶರಾಯರು ಮೊಟ್ಟಮೊದಲಿಗೆ ಸಣ್ಣಕತೆಯನ್ನು ರಚಿಸಿದರು. ಪಂಜೇ ೧೯೦೦ ರಲ್ಲಿ ಮೊದಲಿಗೆ 'ಸುಹಾಸಿನಿ' ಪತ್ರಿಕೆಯಲ್ಲಿ ಪ್ರಕಟಿಸಿದ 'ಭಾರತ ಶ್ರಾವಣ, ಕಮಲಾಪುರ ಹೋಟ್ಲಿನಲ್ಲಿ, ನನ್ನ ಚಿಕ್ಕತಾಯಿ, ನನ್ನ ಚಿಕ್ಕತಂದೆಯವರ ಉಯಿಲ್' ಎಂಬ ಕಥೆಗಳ ಮೂಲಕ ಆಧುನಿಕ ಸಣ್ಣಕತೆಯ ಚರಿತ್ರೆ ಪ್ರಾರಂಭವಾಯಿತೆನ್ನಬಹುದು. ಪಂಜೇಯವರ ಕಥೆಗಳು ಸಾಮಾಜಿಕ ಮತ್ತು ಚಾರಿತ್ರಿಕ ವಸ್ತಗಳನ್ನು ಒಳಗೊಂಡಿವೆ. ಚಾರಿತ್ರಿಕ ಕಥೆಗಳಲ್ಲಿ ಆದರ್ಶಮಯತೆ ಮುಖ್ಯವಾಗಿದೆ. ಅವರು ಬರೆದ ನಾಲ್ಕು ಚಾರಿತ್ರಿಕ ಕತೆಗಳು ವೀರ ರಮಣೀಯರ ಪವಿತ್ರ ಪ್ರೇಮ ಮತ್ತು ಉಜ್ವಲ ಸಾಹಸಗಳನ್ನು ಉಗ್ಗಡಿಸುತ್ತವೆ. ಈ ರಮಣೀಯ ದುರಂತ ಸಾವಿನಲ್ಲಿ ಮುಗಿಯುತ್ತದೆ. ಅವರ ಹೆಸರನ್ನೆ ತಲೆಬರಹವನ್ನಾಗಿ ಉಳ್ಳವಾಗಿವೆ. ಪಂಜೇಯವರ ಒಂಭತ್ತು ಸಾಮಾಜಿಕ ಕಥೆಗಳಲ್ಲಿ ವಸ್ತು ಮತ್ತು ನಿರೂಪಣೆಗಳಲ್ಲಿ ಎದ್ದು ಕಾಣುವ ಗುಣ ಹಾಸ್ಯ ಒಟ್ಟಿನಲ್ಲಿ ಅವರ ಎಲ್ಲಾ ಕಥೆಗಳಲ್ಲಿಯೂ ಹೊಸ ಗನ್ನಡ ಗದ್ಯದ ತೇಜಸ್ಸು ತುಂಬಿಕೊಂಡಿರುವುದು ಕಾಣುತ್ತದೆ.

ಆಧುನಿಕ ಕನ್ನಡ ಸಣ್ಣಕಥಾ ಜಗತ್ತಿನ ನಿರ್ಮಾಣಕ್ಕಾಗಿ ಉತ್ತರ ಕರ್ನಾಟಕದ ದೇಶಿ ಶೈಲಿಯಲ್ಲಿ ಕೆರೂರು ವಾಸುದೇವಾಚಾರ್ಯರು ಕಥೆಗಳನ್ನು ಬರೆದಿದ್ದಾರೆ. ಅವರ ಕಥೆಗಳನ್ನು "ಸಂಪೂರ್ಣವಾಗಿ ಕಥೆಗಳು ಎಂದು ಅವರೇ ಕರೆದುಕೊಂಡಿದ್ದಾರೆ. ಇದಕ್ಕೆ ಇದೇ ಹೆಸರಿನ ಮರಾಠಿ ಕಥೆಗಳ ಪ್ರಭಾವವು ಕಾರಣವೆಂದು ಅಭಿಪ್ರಾಯವು ಇದೆ"೩. ಅವರು ಪಾಶ್ಚಾತ್ಯ ಪತ್ತೆದಾರಿ ಕನನ್ ಡಯಾಲ್ ಮತ್ತು ಶೆರ್ಲಾಕ್ಸ್ ಹೋಮ್ಸ್ ಕಥೆಗಳನ್ನು ರೂಪಾಂತರಿಸಿದ್ದಾರೆ. ಅವರ ಕಥೆಗಳಲ್ಲಿ ಆಧುನಿಕ ಒಳನೋಟಗಳಿವೆ. ಅವೆಂದರೆ 'ತೊಳೆದ ಮುತ್ತು' 'ಮಲೇಶಿಯಾ ನಲ್ಲೇಯರು' ಗಮನಾರ್ಹ ಕಥೆಗಳಾಗಿವೆ. ಅವರ ಕಥೆಗಳಲ್ಲಿ ಕಥನ ಗುಣ ಎದ್ದು ಕಾಣುತ್ತದೆ. ಮತ್ತು ಅವರ ಕಥೆಗಳಿಂದ ಒಂದು ಅಗಾಧವಾದ ಅನುಭವವನ್ನು ಪಡೆಯಬಹುದಾಗಿದೆ.

ಆಧುನಿಕ ಕನ್ನಡ ಕಥಾ ಸಾಹಿತ್ಯದಲ್ಲಿ ಕೆರೂರರಷ್ಟೆ ಸಮರ್ಥವಾಗಿ ಸಣ್ಣಕತೆಗಳನ್ನು ಬರೆದವರು ದಕ್ಷಿಣ ಕನ್ನಡ ಜಿಲ್ಲೆಯ ಎಂ.ಎನ್.ಕಾಮತ್ ರವರು. ಅವರ ಮಾತೃಭಾಷೆ ಕೊಂಕಣಿಯಾದರೂ

ಕನ್ನಡದ ಬೆಳವಣಿಗೆಗೆ ಶ್ರಮಿಸಿದರು. ಷೆರ್ಲಾಕ್ಸ್ ಹೋಮ್ಸ್‌ನ ನಾಯಕ ಪ್ರಧಾನವಾದ ಕೆಲವು ಕಥೆಗಳನ್ನು, ಬಂಗಾಲಿ ಕಥೆಗಳನ್ನು ಕನ್ನಡಕ್ಕೆ ಭಾಷಾಂತರಿಸಿದ್ದಾರೆ. ಅವರ ಕಥೆಗಳೆಂದರೆ 'ಕದ್ದವರು ಯಾರು?' 'ಆ ಮಗು' 'ಬಗ್ಗು ಮಹಾಶಯ' 'ಆ ಊರು ಮಠ' 'ಅಂದಿನ ಆ ಊರು' 'ವೈದ್ಯ ರಾಜ ಧನ್ವಂತರಿ' ಇವರು ಅವರ ಕೆಲವು ಪ್ರಮುಖ ಕಥೆಗಳು.

ಆಧುನಿಕ ಕಥಾ ಸಾಹಿತ್ಯಕ್ಕೆ ಈ ಮೊದಲು ಕಂಡುಬರುವಂತಹ ಕಥೆಗಾರರು ಒಂದು ಮಾರ್ಗವನ್ನೇ ಹಾಕಿಕೊಟ್ಟರು.

**ನವೋದಯ ಸಾಹಿತ್ಯ**

ಸಣ್ಣಕತೆ ಜನಪ್ರಿಯವಾದ ಸಾಹಿತ್ಯ ಪ್ರಕಾರವಾಗಿದೆ. ಇದಕ್ಕೆ ದೊರೆತ ಪ್ರೇರಣೆ-ಪ್ರಭಾವ, ಕಾಲದ ಒತ್ತಡ ಇತ್ಯಾದಿಗಳ ಕಾರಣಗಳಿಂದ ಅನೇಕ ಆಯಾಮಗಳನ್ನು ಪಡೆದುಕೊಂಡು ಮುಂದುವರೆದಿದೆ. ಹೊಸಗನ್ನಡ ಸಾಹಿತ್ಯವನ್ನು ಸಾಮಾನ್ಯವಾಗಿ ನವೋದಯ, ಪ್ರಗತಿಶೀಲ, ನವ್ಯ, ಬಂಡಾಯ ಹಾಗೂ ದಲಿತ ಪಂಥಗಳಾಗಿ ವಿಂಗಡಿಸುವ ಕ್ರಮ ಪ್ರಚಲಿತದಲ್ಲಿದೆ. ಈ ಚೌಕಟ್ಟಿನ ಮಿತಿ ದಾಟಿದ ಸಾಹಿತ್ಯವು ಸಾಕಷ್ಟು ಸೃಷ್ಟಿಯಾಗಿದೆ.

೨೦ನೇ ಶತಮಾನದ ಆರಂಭದ ಐದು ದಶಕಗಳಲ್ಲಿ ರಚನೆಯಾದ ಎಲ್ಲಾ ಸಾಹಿತ್ಯವನ್ನು ನವೋದಯವೆಂದು ಕರೆಯುತ್ತೇವೆ. ಈ ಯುಗದ ಕಥಾಸಾಹಿತ್ಯ ನಮ್ಮ ಸಂಸ್ಕೃತಿಯ ಪುನರಾವಲೋಕನ, ಸಾಮಾಜಿಕ ವೈಶಮ್ಯ, ಸ್ತ್ರೀ-ಪುರುಷರ ಸಂಬಂಧ, ಆದರ್ಶ ಪ್ರೇಮ ಇತ್ಯಾದಿ ಅಂಶಗಳನ್ನು ಪ್ರಮುಖವಾಗಿ ಪರಿಗಣಿಸಿದೆ. ಇತಿಹಾಸ, ಸಂಸ್ಕೃತಿ, ಆಧ್ಯಾತ್ಮ, ಧರ್ಮದ ಉದಾತ್ತತೆಯನ್ನು ವೈಭವೀಕರಿಸಿ ನೋಡುವ ದೃಷ್ಟಿಕೋನವೇ ನವೋದಯ ಸಾಹಿತ್ಯದಲ್ಲಿ ಮೂಡಿಬಂದಿದೆ.

ಪಂಜೇಯವರು ಸಣ್ಣಕಥಾ ಸಾಹಿತ್ಯದಲ್ಲಿ ಮೊದಲಿಗರಾಗಿ ಕಂಡುಬಂದರೂ, ನವೋದಯ ಸಾಹಿತ್ಯದಲ್ಲಿ ಕಾಣಿಸುವ ಮಾಸ್ತಿ ವೆಂಕಟೇಶ ಅಯ್ಯಂಗಾರ್ ರವರು ಕಥಾಸಾಹಿತ್ಯಕ್ಕೆ ವಿಶಿಷ್ಟವಾದ ಮನ್ನಣೆಯನ್ನು ತಂದುಕೊಟ್ಟರು. ಸಣ್ಣಕತೆಗೆ ಸಾಹಿತ್ಯದ ಸ್ವರೂಪ ಬಂದದ್ದು ಮಾಸ್ತಿಯವರಿಂದಲೇ, ಮಾಸ್ತಿಯವರು ಸಣ್ಣಕತೆಯನ್ನು ತಮ್ಮ ಅಭಿವ್ಯಕ್ತಿಯ ಪ್ರಮುಖ ಮಾಧ್ಯಮವನ್ನಾಗಿ ಮಾಡಿಕೊಂಡರು. ಮಾಸ್ತಿಯವರು ಸಣ್ಣಕತೆಯನ್ನು ಕುರಿತು ಈ ರೀತಿ ಹೇಳಿದ್ದಾರೆ "ಇದು ಒಳ್ಳೆಯದು, ಇದು ಕೆಟ್ಟದ್ದು ಅಂತ ಹೇಳೋದಿಲ್ಲ. ನನ್ನ ಮುಖ್ಯ ಉದ್ದೇಶ ಜೀವನದ ಚಿತ್ರ ಕೊಡೋದು, ಕಂಡ ಜೀವನ ಹೇಳೋದು"೪ ಎಂದು ತಮ್ಮ ಆಶಯವನ್ನು ಮಾಸ್ತಿಯವರು ಹೇಳಿಕೊಳ್ಳುತ್ತಾರೆ.

ಮಾಸ್ತಿಯವರು ಕನ್ನಡದ ಮೊದಲ ಮಹತ್ವದ ಸಣ್ಣಕತೆಗಾರ ಎಂಬುದು ನಿರ್ವಿವಾದ ಸಂಗತಿಯಾಗಿದೆ. "ಇವರು ಒಂದು ಗಾಢವಾದ ಧಾರ್ಮಿಕ ಶ್ರದ್ದೆಯಿಂದ ಬದುಕಿನ ವ್ಯವಹಾರಗಳನ್ನೆಲ್ಲ ಪರಿಭಾವಿಸುವ, ವ್ಯಾಖ್ಯಾನಿಸುವ, ಬೆಲೆಕಟ್ಟುವ ಸಾತ್ವಿಕ ಮನಸ್ಸು ಮಾಸ್ತಿಯವರ ಕಥೆಗಳಲ್ಲಿ

ರೂಪು ತಳೆಯುವ ನಿಯಂತ್ರಿಸುತ್ತಿರುವಂತೆ, ನಿರ್ದೇಶಿಸಿರುವಂತೆ ಬೋದೆಯಾಗುತ್ತದೆ. ಪರಾಂಪರಗತಾ ಸಂಸ್ಕೃತಿಯ ಜೀವಸತ್ವವನ್ನು, ಅದರ ತಾಳಿಕೆಯ ಗುಣವನ್ನು, ಅದರ ಹರಿಗಡಿಯಾದ ಸೋಜಿಗವನ್ನು ವ್ಯಕ್ತಿ, ಸಂಗತಿಗಳ ಸಂದರ್ಭದಲ್ಲಿಟ್ಟು ಕೀರ್ತಿಸುವ ಹವಣು ಕಾಣಿಸುತ್ತದೆ. ಆದ್ದರಿಂದ ಬದುಕಿನ ದುಷ್ಟ, ಅಧಾರ್ಮಿಕ, ನಿಷ್ಟುರ ಮುಖಗಳನ್ನು ಪರಂಪರಾಗತ ಮೌಲ್ಯದ ತಾಳಿಕೆಯ ಗುಣವನ್ನು ಉದ್ದೀಪಿಸುವುದಕ್ಕೆ ಎಷ್ಟು ಬೇಕೋ ಅಷ್ಟರ ಮಟ್ಟಿಗೆ ಹಿನ್ನೆಲೆಯ ರೂಪದಲ್ಲಿ ಬಳಸಿಕೊಳ್ಳುತ್ತಾರೆ. ಹಾಗಾಗಿ ಪರಂಪರಾಗತ ಶ್ರದ್ದೆ, ನಂಬಿಕೆಗಳನ್ನು ಪ್ರಶ್ನಿಸುವಂತ ಸನ್ನಿವೇಶ, ಸಂದರ್ಭಗಳು ಎದುರಾದಗಲೂ ಆ ಸಾಂಪ್ರದಾಯಕ ಮೌಲ್ಯಗಳ ಚೌಕಟ್ಟಿನಲ್ಲಿಯೇ ಅದಕ್ಕೆ ಪರಿಹಾರವನ್ನು ಹುಡುಕುವ ಸೂಚಿಸುವ ಧೋರಣೆ ಮತ್ತು ಆತ್ಮವಿಶ್ವಾಸ ಮಾಸ್ತಿಯವರಲ್ಲಿ ಕಾಣುತ್ತದೆ"೫. ಆ ಚೌಕಟ್ಟಿನ ಮಿತಿಯಲ್ಲಿ ಸಾಧ್ಯವಾಗಬಹುದಾದಂತಹ ಅನುಭವದ ಪಕ್ವಾತನ, ಜೀವನ ವಿವೇಕ ಅವರಲ್ಲಿ ಸಮೃದ್ಧವಾಗಿದೆ. ಅವುಗಳ ಜೊತೆಗೆ ನಿರುದಿಗ್ನ ನಿರೂಪಣಾ ಗುಣವು ಹದವಾಗಿ ಸೇರಿಕೊಳ್ಳುವುದರಿಂದ ಅವರ ಕಲೆಗಾರಿಕೆಗೆ ಅನನ್ಯವಾದ ಕಾಂತಿ, ತನ್ನತನದ ಪ್ರಾಪ್ತವಾಗುತ್ತದೆ.

ಮಾಸ್ತಿಯವರು ತಮ್ಮ ಬಹುಪಾಲು ಕಥೆಗಳಲ್ಲಿನ ಪ್ರಧಾನ ಇಲ್ಲವೇ ಜನಾಂಗದ ನಂಬಿಕೆಯ ತಳದಲ್ಲಿ ಚಿಪ್ಪೊಡೆಯದ ಮುಗ್ದತೆಯೊಂದು ಸ್ಥಾಯಿಯಾಗಿರುತ್ತದೆ. ಕಥೆಗಾರ ಶ್ರೀನಿವಾಸರು ಮುಗ್ದತೆಗೆ ತಂದೊಡ್ಡುವ ದುರಂತವನ್ನು, ಸಹಾನುಭೂತಿ, ಅನುಕಂಪ, ಮಾನವೀಯ ದೃಷ್ಠಿಯಿಂದ ಮಾತ್ರ ಪರಿಭಾವಿಸದೇ ಅವುಗಳಿಗೆ ಧನ್ಯಭಾವಗಳನ್ನು ಆರೋಪಿಸುವುದರ ಮೂಲಕ ಆರಾಧಕ ಭಾವದಲ್ಲಿ ನಿಲ್ಲುತ್ತಾನೆ. ಆದ್ದರಿಂದ ಕಥೆಗಾರನ ಪ್ರಜ್ಞೆಯೂ ಕಥೆಯ ಪಾತ್ರಗಳಂತೆಯೇ ಅವುಗಳ ಬದುಕಿನಲ್ಲಿ ದುರಂತಕ್ಕೆ ಹೊರತಾದ ಇತರ ಸಾರ್ಥಕ್ಯ ಸಾಧ್ಯತೆಗಳನ್ನು ಕಾಣಲಾರದ, ಚಿಂತಿಸಲಾರದ ಮುಗ್ಧ ಅಸಾಯಕತೆಯಲ್ಲಿ ಇರುವಂತೆ ತೋರುತ್ತದೆ. ಮಾಸ್ತಿಯವರ ಕಥೆಗಳ ತಂತ್ರದ ಬಗ್ಗೆ ಈ ರೀತಿ ಹೇಳಿದ್ದಾರೆ.

ಜಿ.ಹೆಚ್.ನಾಯಕ ರವರು "ಮಾಸ್ತಿಯವರು ನಿರುದ್ವಿಗ್ನತೆಗೆ ಅವರು ಬಳಸುವ ತಂತ್ರ ವಿಧಾನವೂ ಅನೇಕ ಕಡೆಗಳಲ್ಲಿ ಪೋಷಕವಾಗಿ ಇರುತ್ತದೆ. ಎಂದೋ, ಎಲ್ಲಿಯೋ ನಡೆದ ಪ್ರಸಂಗವನ್ನ ಯಾರಿಗೋ ಹೇಳುತ್ತಿರುವಂತೆ ಇಲ್ಲವೆ ಯಾರೂ ಹೇಳುತ್ತಿರುವಂತೆ ತಂತ್ರ ಯೋಜನೆ ಇರುತ್ತದೆ".೬ ಮೊಸರಿನ ಮಂಗಮ್ಮ, ಗೌತಮಿ ಹೇಳಿದ ಕತೆಗಳ ನಿರೂಪಣಾ ರೀತಿಯು ಈ ಬಗೆಯ ತಂತ್ರಗಳ ಒಂದು ಮಾದರಿ.

ಮಾಸ್ತಿಯವರ ಕಥೆಗಳ ಬಗ್ಗೆ ಕೀರ್ತಿನಾಥ ಕುರ್ತಕೋಟಿ ಯವರು ಈ ರೀತಿ ಅಭಿಪ್ರಾಯ ಪಡುತ್ತಾರೆ "ಶ್ರೀನಿವಾಸರ ಶೈಲಿ ಸ್ಪಟಿಕದಂತೆ ಪಾರದರ್ಶಕವಾದದ್ದು ಆದ್ದರಿಂದ ಯಾವ ವಸ್ತುವು ಬಣ್ಣಗೆಡದೆ ತನಗೆ ಸಹಜವಾದ ಆಕೃತಿ ವಿಶೇಷದಿಂದ ಪ್ರಕಟವಾಗಿಬಿಡುತ್ತವೆ".೭

"ಸಾಹಿತ್ಯದಲ್ಲಿ (ಸಣ್ಣಕತೆಗಳಿಗೆ) ಒಂದು ಸ್ಥಾನ ದೊರೆಯುವಂತೆ ಪ್ರಭಾವಯುತವಾಗಿ ಸಣ್ಣಕತೆಗಳನ್ನು ಬರೆದ ಕೀರ್ತಿ. . . ಶ್ರೀಮಾನ್ ಶ್ರೀನಿವಾಸರಿಗೆ ಸಲ್ಲತಕ್ಕದ್ದು. ಉಳಿದ ಶ್ರೇಷ್ಠ

ಕಥೆಗಾರರೆಲ್ಲರೂ ಅವರ ಮಾರ್ಗನುಯಾಯಿಗಳು ಅಥವಾ ಅವರ ಕಥೆಗಳಿಂದ ಹುರಿಗೊಂಡು, ಸ್ಫೂರ್ತಿಗೊಂಡು ಬರೆಯ ಹೊರಟರು".೮ ಎಂದು ತಸು ಶಾಮರಾಯರು ತೀರ್ಮಾನಿಸಿದ್ದಾರೆ.

ಶ್ರೀನಿವಾಸರ ಪ್ರಭಾವದಿಂದ ಬೆಳೆದುಬಂದ ಕಥೆಗಾರರನ್ನು ಇಲ್ಲಿ ಪರಿಶೀಲಿಸುವುದು ಪ್ರಸ್ತುತ. ಅವರೆಂದರೆ ಆನಂದ, ಆನಂದಕಂದ, ಅಶ್ವತ್ಥ ರವರನ್ನು ಹೆಸರಿಸಬಹುದು.

ಮಾಸ್ತಿಯವರ ಪ್ರಭಾವದಲ್ಲಿಯೇ ಆನಂದರು ತಮ್ಮ ಬರವಣಿಗೆಯನ್ನು ಪ್ರಾರಂಭಿಸಿದರು. ಅವರ 'ಭವತೀ ಭಿಕ್ಷಾಂ ದೇಹಿಯ' ಮುನ್ನುಡಿಯಲ್ಲಿ ಇದರ ಸ್ಪಷ್ಟ ಉಲ್ಲೇಖವಿದೆ. "ನನಗೆ ಸಣ್ಣಕತೆಗಳನ್ನು ಬರೆಯಬೇಕೆಂಬ ಆಸೆ ಹುಟ್ಟಿದ್ದು ಶ್ರೀನಿವಾಸರ ಕಥೆಗಳನ್ನು ಓದಿದ ಮೇಲೆ ಅವರ ಕಥೆಗಳು ನನ್ನ ಮನಸ್ಸಿನಲ್ಲಿ ಎಂದಿಗೂ ಅಳಿಸಿಹೋಗದಂತಹ ಪರಿಣಾಮವನ್ನುಂಟು ಮಾಡಿವೆ. ನನ್ನ ಕಥೆಗಳಲ್ಲಿ ಅಲ್ಲಲ್ಲಿ ಅವರ ಶೈಲಿಯು ಕಂಡುಬಂದರೆ, ಅದು ಅವರ ಕಥೆಗಳನ್ನು ಮೇಲಿಂದ ಮೇಲೆ ಓದಿದ್ದರ ಫಲವೆಂದು ತಿಳಿಯಬೇಕು"೯.

ಆನಂದರ ಬಹುಪಾಲು ಕಥೆಗಳು ಒಂದು ಕೌಂಟುಂಬಿಕ ಚೌಕಟ್ಟಿನಲ್ಲಿ ನಡೆಯುತ್ತವೆ. ಅದರಲ್ಲೂ ಗಂಡ-ಹೆಂಡತಿ, ಹೆಚ್ಚೆಂದರೆ ಒಂದು ಮಗು ಇಷ್ಟೇ ವಿಸ್ತಾರದ ಕುಟುಂಬವಾಗಿರುತ್ತದೆ. ಮಧ್ಯಮ ವರ್ಗದ ಸಾಕಷ್ಟು ನೆಮ್ಮದಿ, ಪರಸ್ಪರ ಸೌಹಾರ್ದ, ರಸಿಕತೆವುಳ್ಳ ದಂಪತಿಗಳ ಸಂಸಾರವಾಗಿರುತ್ತದೆ. ಅಲ್ಲಿಯೂ ಸರಸ ಸಲ್ಲಾಪ, ಪ್ರಣಯ, ಚೇಷ್ಟೆಗಳದ್ದೆ ಪ್ರಾಧಾನ್ಯ. ಈ ಕೌಟುಂಬಿಕ ಆವರಣದಿಂದ ಹೊರಗೆ ಹೋದರೆ ಅಲ್ಲಿಯೂ ವಿವಾಹ ಪೂರ್ವ ಪ್ರೇಮ ಮತ್ತು ಪ್ರಣಯದ ಆಟಗಳು, ಇಷ್ಟಾದರೂ ಗೃಹಸ್ಥನ ಧಾರ್ಮಿಕ ಹಕ್ಕಿನ ಆಚೆಯ ಪ್ರಣಯ, ಪ್ರೇಮ ಪ್ರಕರಣಗಳು ಇರುವುದು ಸಾಧ್ಯವೇ ಇಲ್ಲ. ಕೈಹಿಡಿದ ಹೆಂಡತಿಯ ಬಗ್ಗೆ ಸಂಪೂರ್ಣ ನಿಷ್ಠೆ ತೋರದ ಒಬ್ಬ ಗಂಡನೂ ಭವಿಷ್ಯ: ಇಲ್ಲ, ಹೆಂಡತಿಯೂ ಇದಕ್ಕೆ ಅಪವಾದವಲ್ಲ. ಅಂತಹದ್ದೇನಾದರೂ ಇರುವುದಾದರೇ ಒಂದು ಭ್ರಾಮಕ ಇಲ್ಲವೇ ಉನ್ಮಾದಕ ಸ್ಥಿತಿಯಲ್ಲಿ ಮಾತ್ರ ಅಂತಹ ಸಂದರ್ಭಗಳಲ್ಲಿ ಇರುವ ಗಂಡು ನಿಜವಾದರೂ ಹೆಣ್ಣು ಕಲ್ಪನೆಯದೋ, ಕನಸಿನದೋ ಆಗಿರುತ್ತದೆ. ಈ ಎಲ್ಲಾ ಕಡೆಗಳಲ್ಲಿಯೂ ಇರುವ ಗಂಡಸು ಸಾಮಾನ್ಯವಾಗಿ ಕಥೆಗಾರನೋ, ಚಿತ್ರಕಾರನೋ, ನಟನೋ ಅಂತಹದ್ದೇ ಇನ್ನೇನೊ ಆಗಿರುತ್ತಾನೆ. ಒಟ್ಟಿನಲ್ಲಿ ಸರಸ ದಾಂಪತ್ಯದ ಇಲ್ಲವೆ ಸರಸ ಪ್ರೇಮ ಸಲ್ಲಾಪ ಚೇಷ್ಟೆಗಳನ್ನೆ ತಿರು-ತಿರುಗಿ ಚಪ್ಪರಿಸುವ ಲೋಲುಪತೆ ಆನಂದರ ಕಥೆಗಳಲ್ಲಿ ಕಂಡುಬರುವ ಅಂಶಗಳಾಗಿವೆ.

ಆನಂದರ ನಂತರ ಇದೇ ಮಾರ್ಗದಲ್ಲಿ ಕಂಡುಬರುವಂತಹವರು ಅಶ್ವತ್ಥರು. ಮಾಸ್ತಿ ಅಥವಾ ಆನಂದರಂತೆ ಅಶ್ವತ್ಥರಿಗೆ ಹೆಚ್ಚು-ಕಡಿಮೆ ನಿಗದಿಯಾದ ಅನುಭವ ಪ್ರಪಂಚ ಎಂಬುದಿಲ್ಲ. "ಇವರು ಯವುದೇ ವಿಧವಾದ ಮಡಿವಂತಿಕೆಯ ಸಂಕೋಚವಿಲ್ಲದೆ ಬದುಕಿನ ಎಲ್ಲಾ ಬಗೆಯ ಅನುಭವಗಳಿಗೆ ಮುಕ್ತವಾಗಿ ತೆರೆದುಕೊಂಡಿರುವ ಮನಸ್ಥಿತಿ ಇವರದು. ಹೀಗೆ ಅನಿರ್ಧಿಷ್ಟ ಉದ್ದೇಶ ರಹಿತ ಎಂಬಂತೆ ತೋರುವ ಅವರ ಬರವಣಿಗೆಯ ಹಿನ್ನಲೆಯಲ್ಲಿ ಒಂದು ಮಾನವೀಯ

ದೃಷ್ಟಿಕೋನದ ಜೀವಂತ ತುಡಿತವಿರುತ್ತದೆ. ಮನುಷ್ಯನ ಉದಾತ್ತತೆಯನ್ನು,ದೌರ್ಬಲ್ಯ ಸಣ್ಣತನಗಳನ್ನು, ಸಾಂಪ್ರದಾಯಿಕ ಧರ್ಮ ಮತ್ತು ನೀತಿಯ ಚೌಕಟ್ಟಿನಲ್ಲಿ ಮಾತ್ರ ಅರ್ಥೈಸದೇ ಮನುಷ್ಯನ ಮನಸ್ಸಿನ ಮತ್ತು ಮಾನವೀಯ ಸಂದರ್ಭದ ಇತರ ಸಾಧ್ಯತೆಗಳನ್ನು ನಿರ್ಭಯವಾಗಿ ಗುರುತಿಸಬಲ್ಲ ಉದಾರ ಧೋರಣೆ ಇವರಲ್ಲಿ ಕಾಣುತ್ತದೆ"೧೦. ಆದರೆ ಅಭಿವ್ಯಕ್ತಿ ಪ್ರಕ್ರಿಯೆಯಲ್ಲಿ ಲೋಕಾಭಿರಾಮತೆ **(Casualne)** ಯ ಅಂಶ ಒಂದು ಮಟ್ಟದಲ್ಲಿ ಉದ್ದಕ್ಕೂ ಉಳಿದುಕೊಂಡು ಬಿಡುವುದರಿಂದ ತಕ್ಕ ಪ್ರಮಾಣದ ಸೃಜನಾತ್ಮಕ ಏಕಾಗ್ರತೆ ಮತ್ತು ಬಿಗಿ ಸಾಧ್ಯವಾಗದೇ ಹೋಗುತ್ತದೆ. ಮಾಸ್ತಿ, ಆನಂದರ ಮಟ್ಟದ ಕಲಾತ್ಮಕತೆ ಅಶ್ವತ್ಥರ ಕಥೆಗಳಲಿಲ್ಲ. ಆದರೆ ಅಶ್ವತ್ಥರ ಮಟ್ಟದ ನಮ್ಯಗುಣ ಬಹುಷ್ಯಃ ನವೋದಯ ಸಣ್ಣಕತೆಗಾರರಲ್ಲಿ ಯಾರಲ್ಲಿಯೂ ಇಲ್ಲ.

ಹೀಗೆ ಈ ಮೇಲಿನ ಕಥೆಗಾರರಾದ ಮಾಸ್ತಿ, ಆನಂದ, ಅಶ್ವತ್ಥರ ಸಣ್ಣಕತೆಗಳ ಪ್ರಭಾವಕ್ಕೊಳಗಾದವರಲ್ಲಿ ಎಂ.ವಿ.ಸೀತಾರಾಮಯ್ಯನವರು ಒಬ್ಬರು. ಎಂ.ವಿ.ಸೀ.ರವರ ಕಾಲ (೯-೯-೧೯೧೦ ರಿಂದ ೧೨-೩-೧೯೮೯) ರವರು ಮೈಸೂರಿನಲ್ಲಿ ಜನಿಸಿದರು. ಇವರ ಬಾಲ್ಯ ವಿದ್ಯಾಭ್ಯಾಸ ಮೈಸೂರಿನಲ್ಲೇ ನಡೆಯಿತು. ಅವರು 'ರಾಘವ' ಎಂಬ ಕಾವ್ಯನಾಮದಿಂದ ಪ್ರಸಿದ್ಧರಾದ ಕವಿಗಳು, ಸಾಹಿತಿ ವಿದ್ವಾಂಸರೂ ಆಗಿದ್ದ ಎಂ.ವಿ.ಸೀತರಾಮಯ್ಯ ನವರು ವೃತ್ತಿಯಿಂದ ಶಿಕ್ಷಕರು. ಇವರು ಕನ್ನಡ ಎಂ.ಎ ಮಾಡಿದರು. ಕೆಲವು ಕಾಲ ಕನ್ನಡ ಸಾಹಿತ್ಯ ಪರಿಷತ್ತಿನ ಕಾರ್ಯದರ್ಶಿಯಾಗಿ ಹಾಗೂ ಕನ್ನಡ ನಿಘಂಟಿನ ಸಹಾಯಕ ಸಂಪಾದಕರಾಗಿ ಸೇವೆ ಸಲ್ಲಿಸಿ ನಂತರ ಸೇವಾವಧಿಪೂರ್ತಿ ಬೆಂಗಳೂರಿನ ಇಂಟರ್‌ಮೀಡಿಯೇಟ್ (ಈಗಿನ ಸರ್ಕಾರಿ ಕಲಾ ಕಾಲೇಜು) ಕಾಲೇಜಿನಲ್ಲೆ ಕನ್ನಡ ಅಧ್ಯಾಪಕರಾಗಿ ನಿವೃತ್ತರಾದರು. ಕೆಲವು ಕಾಲ ಬೆಂಗಳೂರು ವಿಶ್ವವಿದ್ಯಾಲಯದಲ್ಲಿ ಯು.ಜಿ.ಸಿ ಪ್ರಾಧ್ಯಾಪಕರಾಗಿ ಸೇವೆ ಸಲ್ಲಿಸಿದರು. ಕನ್ನಡದ ದಿಗ್ಗಜಗಳೆನಿಸಿದ್ದ ಆಚಾರ್ಯ ಬಿ.ಎಂ.ಶ್ರೀ, ಟಿ.ಎಸ್.ವೆಂಕಣ್ಣಯ್ಯ, ಎ.ಆರ್.ಕೃಷ್ಣಶಾಸ್ತ್ರಿ, ತೀ.ನಂ.ಶ್ರೀ, ಡಿ.ಎಲ್.ಎನ್. ರವರುಗಳ ಶಿಷ್ಯರಾಗಿ ಅವರ ಗರಡಿಯಲ್ಲಿ ಪಳಗಿದ್ದ ಸೀತಾರಾಮಯ್ಯ ನವರು ಡಿ.ವಿ.ಜಿ, ಮಾಸ್ತಿ ಮತ್ತು ರಾಜರತ್ನಂ ಮುಂತಾದವರ ಒಡನಾಡಿಗಳು ಆಗಿ ಬಹುಮುಖ ವ್ಯಕ್ತಿತ್ವವನ್ನು ಸಂಪಾದಿಸಿದ್ದರು. ಭಾಗವತ ಭಕ್ತರಾಗಿದ್ದ ತಿಮ್ಮಪ್ಪದಾಸರ ವಂಶದಲ್ಲಿ ಹುಟ್ಟಿದ್ದುದರಿಂದ ವಂಶಪಾರಂಪರ್ಯವಾಗಿಯೂ, ಸಾಹಿತ್ಯ ಅಧ್ಯಯನ ಮತ್ತು ಅಧ್ಯಾಪನದಿಂದಲೂ ರಸವಿವೇಕವನ್ನು ಪಡೆದಿದ್ದ ಸೀತಾರಾಮಯ್ಯನವರು ಸಹಜವಾಗಿ ಸಾಹಿತಗಳಾದರು. ಸಾಹಿತ್ಯದ ವಿವಿಧ ಪ್ರಕಾರಗಳಲ್ಲಿ ಕತೆ, ಕಾದಂಬರಿ. ಕಾವ್ಯ-ಶಿಶು ಸಾಹಿತ್ಯ, ಪ್ರಬಂಧ, ವ್ಯಕ್ತಿಚಿತ್ರ, ಹರಟೆ, ಸಂಶೋಧನೆ ಇತ್ಯಾದಿ ಹಲವು ಕ್ಷೇತ್ರಗಳಲ್ಲಿ ನೂರು ಕೃತಿಗಳನ್ನು ರಚಿಸಿದ್ದಾರೆ. ಎಂ.ವಿ.ಸೀಯವರನ್ನು ಹಲವರು 'ಸಂಶೋಧಕರೆಂದೆ' ಗುರುತಿಸುವುದುಂಟು.

ಎಂ.ವಿ.ಸೀಯವರೇ ಸಣ್ಣಕತೆಗಳ ಬಗ್ಗೆ ಆಸಕ್ತಿ ಬಂದಿದ್ದನ್ನು ಆಸ್ವಾದ ಗ್ರಂಥದಲ್ಲಿ ಈ ರೀತಿ ಹೇಳಿಕೊಂಡಿದ್ದಾರೆ. ಹೀಗೆ ತೀ.ನಂ.ಶ್ರೀಯವರ ಜೊತೆಜೊತೆಯಲ್ಲೆ ಲಲಿತ ಪ್ರಬಂಧ, ಸಣ್ಣಕತೆ, ನಾಟಕ ಈ ಸಾಹಿತ್ಯ ಪ್ರಕಾರಗಳಲ್ಲಿಯೂ ನನ್ನ ಪ್ರಾರಂಭದ ಕೃತಿ ರಚನೆ ಸಾಗಿತು. ನನಗೆ ಸಣ್ಣಕತೆಗಳ ರಚನೆಗೆ ಪ್ರೇರಣೆ ನೀಡಿದ್ದು ಎಸ್.ಎಸ್.ಎಲ್.ಸಿ ತರಗತಿಯಲ್ಲಿ ಪಠ್ಯಪುಸ್ತಕವಾಗಿ

ನಾನು ಓದಿದ್ದ 'ಶ್ರೀನಿವಾಸರ' ಮೊದಲ ಕಥಾ ಸಂಕಲನ "ಕೆಲವು ಸಣ್ಣ ಕತೆಗಳು" ವಾಸ್ತವವಾಗಿ ನಮ್ಮ ಕನ್ನಡ ಪಂಡಿತ ರಾಮಯ್ಯನವರು, "ಪಾಠ ಮಾಡುವುದು ಇದಲ್ಲಿ ಏನಿದೆ? ನೀವೇ ಓದಿಕೊಳ್ಳಿ" ಎಂದು ಈ ಪುಸ್ತಕವನ್ನು ಪಾಠ ಮಾಡಲೇ ಇಲ್ಲ! ಮುಂದೆ ಆಂಗ್ಲ ಕತೆಗಾರರ ಕಥಾತಂತ್ರಗಳಿಂದ ಪ್ರಭಾವಿತನಾದೆ. ಅಮೇರಿಕಾದ ಕಥೆಗಾರ ನಥೇನಿಯಲ್ ಹತಾರ್ನನ Rappaccinic's Daughter, The Great stone face, Prophetic pictures ಎಂಬ ಮೂರು ಕಥೆಗಳನ್ನು ಪ್ರಾರಂಭದಲ್ಲಿ ರೂಪಾಂತರ ಮಾಡಿದೆ. ಇವೂ, ಅನುವಾದಗೊಂಡ ಇನ್ನು ೪ ಕಥೆಗಳೂ ಕೂಡಿ ೧೯೩೬ ರಲ್ಲಿ "ಶಿಲಾಮುಖ" ಎಂಬ ಹೆಸರಿನ ಸಂಕಲನದಲ್ಲಿ ಪ್ರಕಟವಾದವು. ಶಿಕ್ಷಕ-ಶಿಕ್ಷಣ ಶಾಲಾ ತರಗತಿಗಳಿಗೆ ಪಠ್ಯವು ಆಯಿತು. ಈ ಅನುವಾದಗಳಿಂದಾಗಿ ಕಥೆ ಬರೆಯುವ ಕಲೆಯಲ್ಲಿ ಕೈ ಕುದುರಿತು. ಅದರ ಜೊತೆ-ಜೊತೆಗೆ ಸ್ವತಂತ್ರ ಕಥೆಗಳನ್ನು ಬರೆಯತೊಡಗಿದೆ. ನನ್ನ ಮೊಟ್ಟ ಮೊದಲ ಕಥೆ 'ದೋಸೆಯ ಆಸೆಯೋ'? (೧೯೨೬) ಕಾಲೇಜಿನ ಯೂನಿಯನ್ ಪತ್ರಿಕೆಯಲ್ಲಿ ಪ್ರಕಟವಾಯಿತು.

ಎಂ.ವಿ.ಸೀ.ಯವರ "ಕಥೆ, ಕಾವ್ಯ, ಕಾದಂಬರಿ, ನಾಟಕಗಳಲ್ಲಿ ಕಂಡುಬರುವ ವಸ್ತುಗಳು. ಇವರು ಸಮಾಜದಲ್ಲಿ ಕಂಡುಬಂದ ದಾರುಣ ಪ್ರಸಂಗಗಳೇ ಇವರ ಸಾಹಿತ್ಯದಲ್ಲಿ ಒಡಮೂಡಿವೆ" ೧೧.

ಈಗ ನಮ್ಮ ಅಧ್ಯಯನದ ಅನುಕೂಲಕ್ಕೋಸ್ಕರ ನಾವು ಎಂ.ವಿ.ಸೀಯವರ ಸಣ್ಣಕತೆಗಳ ಬಗ್ಗೆ ವಿವೇಚಿಸುವುದು ಸೂಕ್ತ. ಸಣ್ಣಕತೆಗಳನ್ನು ಕುರಿತು ಎಂ.ವಿ.ಸೀ ಯವರೇ ಈ ರೀತಿ ಹೇಳಿಕೊಂಡಿದ್ದಾರೆ. "ನಿಮ್ಮ ಉತ್ತಮ ಕೃತಿಗಳು ಯಾವುವು ಎಂದು ಅವರನ್ನೇ ಕೇಳಿದರೆ "ನನ್ನ ಸಣ್ಣಕತೆಗಳು ಒಂದೊಂದು ದೃಷ್ಟಿಯಿಂದ ಒಂದೊಂದು ಮೇಲಾಗಿ ಕಂಡೀತು ಎನ್ನುತ್ತಾರೆ. ವಿಮರ್ಶಕರು ತಮ್ಮ ಕೃತಿಯನ್ನು ಚೆನ್ನ ಉತ್ತಮ ಎಂದು ಅಭಿಪ್ರಾಯಿಸಿದರೆ ಅದು ತಮಗೂ ಉತ್ತಮವಾಗಿಯೇ ಕಾಣಿಸುತ್ತದೆ ಎನ್ನುತ್ತಾರೆ. ಎಂದರೆ ಓದುಗರಿಗೆ ಯಾವುದು ಒಪ್ಪಿತವೋ, ಯಾವುದು ಸಂತೋಷದಾಯಕವೋ ಅದೇ ತಮ್ಮ ಸೃಷ್ಟಿಯಲ್ಲಿ ಉತ್ತಮವಾಗಿದೆ ಎಂದು ಒಪ್ಪಿಕೊಂಡಿದ್ದಾರೆ.".೧೨ ಸೀತಾರಾಮಯ್ಯನವರು ತಮ್ಮ ರಚನೆಯ ಸೊಗಸನ್ನು ವಾಚಕರ ಮುಖಾಂತರ ಕಾಣುವರು ಹಾಗೆಯೇ ಅವರು ಗದ್ಯಮಾಧ್ಯಮದ ರಚನೆಗೆ ಆರಿಸಿಕೊಂಡ ವಸ್ತುಗಳೂ ಅಷ್ಟೇ, ಸಮಾಜದ ನೋವು-ನಲಿವು, ಕಷ್ಟ-ಸುಖ, ಸಮಸ್ಯೆ ಪ್ರಶ್ನೆಗಳೇ ವಿಶೇಷ.

ಈ ನೆಲೆಯಲ್ಲಿ ಸಾಹಿತ್ಯದ ಬಗ್ಗೆ ಅವರು ತಮ್ಮದೇ ಆದ ವಿಶಿಷ್ಟ ಅಭಿಪ್ರಾಯವನ್ನು ಹೊಂದಿದ್ದಾರೆ ಹಾಗೆಂದು ಸಾಹಿತ್ಯದಲ್ಲಿ ಮಡಿವಂತಿಕೆ ಅಗತ್ಯ ಎಂದು ಹೇಳುವುದಿಲ್ಲ. ಮಡಿವಂತಿಕೆ ಎಂಬುದರ ಅರ್ಥ, ಅವರ ಪ್ರಕಾರ ಸಂಪ್ರದಾಯ, ಸಂಪ್ರದಾಯ ಶೀಲತೆ, ಇದು ಯಾವ ಒಂದು ಕರ್ಮವನ್ನು ಬಿಟ್ಟುಹೋಗುವುದಿಲ್ಲ. ಒಂದು ಮಾರ್ಗ ಆರಂಭವಾಗಿ ಅದನ್ನೆ ಕೆಲವರು ಕೆಲವು ಕಾಲ ಮುಂದುವರಿಸಿದರೆ ಆ ಮೊದಲ ಮಂದಿ ಅನುಯಾಯಿಗಳಿಗೆ ಆದರ್ಶವ್ಯಕ್ತಿಗಳಾಗುತ್ತಾರೆ.

ಕನ್ನಡ ಸಾಹಿತ್ಯ ಶುದ್ದವಾಗಿರಬೇಕೆಂಬ ಏಕೈಕ ಅಭಿಪ್ರಾಯವನ್ನು ತಾಳಿರುವ ಸೀತಾರಾಮಯ್ಯ ಪ್ರಗತಿಶೀಲ, ನವ್ಯ, ದಲಿತ, ಬಂಡಾಯ ಮೊದಲಾಗಿ ಪ್ರಚಲಿತವಾಗಿರುವ ಪ್ರಕಾರಗಳ ಬಗ್ಗೆ ತಮ್ಮದೇ ಖಚಿತ ಭಾವನೆಗಳನ್ನು ಹೊಂದಿದ್ದಾರೆ.

ರಾಘವರ ಕಥೆಗಳ ಬಗ್ಗೆ ಹೇಳಬೇಕೆಂದರೆ ಇವರ ಕತೆಗಳ ಪ್ರಪಂಚದಲ್ಲಿ ನಮಗೆ ಪರಿಚಿತವಾಗಿರುವ ಜನ ಹಲವು ರೀತಗಳವರು. ರಾಘವರು ಯಾವ ಒಂದು ಧೋರಣೆಯ ಯೋಧರು ಆಗದೆ, ತಮ್ಮ ಸುತ್ತಮುತ್ತಲಿನ ಜೀವನವನ್ನು ಸಹಾನುಭೂತಿಯಿಂದ ಚಿತ್ರಿಸುವ ಗುರಿಯಿಂದಲೇ ಪ್ರೇರಿತವಾಗಿರುವುದರಿಂದ ಅವರು ಸೃಷ್ಟಿಸಿರುವ ವ್ಯಕ್ತಿಗಳು ವೈವಿಧ್ಯವನ್ನು, ಜೀವಕಳೆಯನ್ನೂ ಪಡೆದಿರುತ್ತಾರೆ. ಇದೇ ಕಾರಣದಿಂದ ಅವರ ಕತೆಗಳಲ್ಲಿ ವಸ್ತುವೈವಿಧ್ಯವೂ, ಭಾವವೈವಿಧ್ಯವೂ ಕಂಡುಬರುತ್ತದೆ. ಸಮಾಜದ ಯಾವ ಒಂದು ಭಾಗದ ಮೇಲೆಯೇ ಬೆಳಕು ಚೆಲ್ಲುವುದಾಗಲಿ, ಯಾವ ಒಂದು ಭಾವನೆಯನ್ನು ಕೆರಳಿಸುವುದಾಗಲೀ ಅವರ ಉದ್ದೇಶವಲ್ಲ. ಆದ್ದರಿಂದ ಹಲವು ಬಗೆಯ ಘಟನೆಗಳು ಕೆಲವು ಬಹಳ ಅರ್ಥಪೂರ್ಣವಲ್ಲದಿದ್ದರೂ ಆಸಕ್ತಿಯುನ್ನುಂಟು ಮಾಡುವಂತಹವು. ಕೆಲವು ಬಾಳಿನ ಗಹನತೆ ಕ್ಲಿಷ್ಟತೆಗಳನ್ನು ಸೂಚಿಸುವ ಪ್ರತೀಕಗಳು ಅವರ ಕತೆಗಳ ಅಡಿಪಾಯವಾಗುತ್ತವೆ.

ಎಂ.ವಿ.ಸೀಯವರ ಕತೆಗಳ ಬಗ್ಗೆ ಎಲ್.ಎಸ್.ಶೇಷಗಿರಿರಾವ್ ರವರು ಈ ರೀತಿ ಅಭಿಪ್ರಾಯ ಪಡುತ್ತಾರೆ. ರಾಘವರ ಪ್ರಮುಖ ಉದ್ದೇಶಗಳಲ್ಲೊಂದಾದ ಸಜ್ಜನಿಕೆಯ ದರ್ಶನ ಎನ್ನಬಹುದು. ಅವರ ಅನೇಕ ಕಥೆಗಳು ಒಂದು ಸ್ವಾರಸ್ಯಕರವಾದ ತಮಾಷೆಯ ಪ್ರಸಂಗವನ್ನು ನಿರೂಪಿಸುತ್ತವೆ.

ಓದುವಾಗ ಸಂತೋಷ ಕೊಡುವುದೇ ಅವುಗಳ ಸಾರ್ಥಕ್ಯ (ಇದು ಅಪರಾಧವೇನೂ ಅಲ್ಲ) ಹಸ್ತಪರಿಗ್ರಹಣ ಇಂಥದೊಂದು ಕಥೆ. ಭಾವ-ಭಾವಮೈದ ಚಲನಚಿತ್ರ ನೋಡಲು ಹೋಗಿ ಮಧ್ಯೆ ಕುಳಿತ ಸುಂದರಿಯ ಕೈ ಎಂದು ಪರಸ್ಪರ ಕೈಹಿಡಿದುಕೊಂಡು ಕುಳಿತುಕೊಂಡಿದ್ದು ಸಿನಿಮಾ ಮುಗಿದು ದೀಪ ಬಂದಾಗ ನಿಜಾಂಶ ತಿಳಿಯುತ್ತಾರೆ. ಹೀಗೆ ಇವರು ಕುಳಿತ್ತಿದ್ದಾಗಲೇ ಸಿಪಾಯಿಯೊಬ್ಬ ಭಾವನಿಗೆ ಅರಿವಾಗದಂತೆ ಅವನ ಜುಟ್ಟನ್ನು ಕತ್ತರಿಸಿಬಿಟ್ಟಿರುತ್ತಾನೆ.

ಅಲ್ಲದೇ ರಾಘವರ ಹಲವು ಕಥೆಗಳ ಉದ್ದೇಶ ಜೀವನದಲ್ಲಿರುವ ಕಷ್ಟ ಯಾತನೆಗಳತ್ತ ಗಮನ ಸಳೆಯುವುದು. ಹೀಗೆ ಮನಸ್ಸನ್ನು ಮೃದಗೊಳಿಸುವುದು, ನವೋದಯ ಸಾಹಿತ್ಯ ಮಿಮಾಂಸೆ ಸಾಹಿತ್ಯದ ಈ ಶಕ್ತಿಯನ್ನು ಮುಖ್ಯ ಎಂದು ಪರಿಗಣಿಸಿತ್ತು. ಸ್ವಭಾವತಃ ಮನುಷ್ಯನಲ್ಲಿ ಸ್ವಾರ್ಥವಿರುತ್ತದೆ. ಸಾಹಿತ್ಯ ಮನಸ್ಸನ್ನು ಮೃದುಗೊಳಿಸುತ್ತದೆ. ಇತರರತ್ತ ಅದನ್ನು ತಿರುಗಿಸಿ, ಇತರ ಕಷ್ಟ-ಸುಖಗಳಲ್ಲಿ ಅದನ್ನು ತಲ್ಲೀನಗೊಳಿಸಿ ಮನುಷ್ಯ ಇತರರಲ್ಲಿ ಅನುಕಂಪ ತೋರುವಂತೆ ಮಾಡುತ್ತದೆ. ಇದು ನವೋದಯ ವಿಚಾರ ರೀತಿ. ದಿನ ಜೀವನ ನಡೆಸುವವರು ಎಷ್ಟೋ ಬಾರಿ ನಮಗೆ ಅರಿಯದಂತೆ ಕೆಂಡದ ಹಾದಿಯನ್ನು ತುಳಿಯುತ್ತಾರೆ ಎಂಬುದನ್ನು ಮನವರಿಕೆ ಮಾಡಿಕೊಡುವ ಅನೇಕ ಕಥೆಗಳನ್ನು ಎಂ.ವಿ.ಸೀಯವರು ಬರೆದಿದ್ದಾರೆ. ಪೆಪ್ಪರಮೆಂಟು ಇಂತಹ ಕಥೆ.

ಹೀಗೆ ಒಟ್ಟಾರೆ ಸಣ್ಣಕಥಾ ಜಗತ್ತಿನಲ್ಲಿ ಹಲವು ಮಜಲುಗಳನ್ನು ಗುರುತಿಸುತ್ತೇವೆ. ಅನೇಕ ಹಂತಗಳನ್ನು ದಾಟಿ ಇಂದಿನ ಕಥಾ ಜಗತ್ತನ್ನು ನಾವು ನೋಡುತ್ತಿದ್ದೇವೆ. ಸಣ್ಣಕತೆಗಳಲ್ಲಿ ಹಲವು ರೀತಿಯ ವಸ್ತುಗಳನ್ನು ಇಟ್ಟುಕೊಂಡು ಕತೆಗಳನ್ನು ರಚಿಸಿದ್ದಾರೆ.

'ರಾಘವರ' ನವೋದಯ ಸಾಹಿತ್ಯ ಮತ್ತು ಪ್ರಗತಿಶೀಲ ಸಾಹಿತ್ಯ ನಡುವೆ ಅಂದರೆ ನವೋದಯ ಕಾಲದ ದ್ವಿತೀಯ ಕಾಲಘಟ್ಟದಲ್ಲಿ ಇವರು ಸೇತುವೆಯಂತೆ ಕೆಲಸ ನಿರ್ವಹಿಸಿರುವುದು ಕಂಡುಬರುತ್ತದೆ. ಆದರೆ ರಾಘವರು ಇಲ್ಲಿ ಯಾವ ಘಟ್ಟದ ಪ್ರಭಾವಕೊಳಗಾಗದೇ ಅಂದಿನ ಕಾಲಕ್ಕೆ ರುಚಿಸುವಂತೆ ಸಣ್ಣಕತೆಗಳನ್ನು ಬರೆದರು. ಆದರೆ ಇಂದು ಸಣ್ಣಕತೆಗಳು ನಮಗೆ ರುಚಿಸದೇ ಇರಬಹುದು. ಇವರ ಸಣ್ಣಕತೆಗಳಲ್ಲಿ ಅಶ್ಲೀಲತೆಗೆ ಅವಕಾಶವಿಲ್ಲ. ಇವರ ಸಣ್ಣಕತೆ ಒಂದು ಸಂಸಾರದ ಚೌಕಟ್ಟಿನಲ್ಲಿ ನೆಡೆಯುವಂತೆ ನೋಡಿಕೊಳ್ಳುವುದು ಅಲ್ಲದೇ ಅಲ್ಲಿ ಮೊದ-ಮೊದಲು ವಿರಸ ದಾಂಪತ್ಯ ಕಂಡುಬಂದು ಕಥೆ ಕೊನೆಗೆ ತನ್ನ ತಪ್ಪಿನ ಅರಿವುಮೂಡಿಸುವುದು ಇವರ ಕಥೆಗಳ ವೈಶಿಷ್ಟ.

ಅವರು ಸಮಾಜದಲ್ಲಿ ಇರುವ ಲೋಪದೋಷಗಳನ್ನು ತಿದ್ದಲು ಸಾಹಿತ್ಯ ಅಂದು ಸೂಕ್ತ ಮಾಧ್ಯಮ ಎಂದು ತಿಳಿದು ಸಾಹಿತ್ಯದಿಂದ ಸಮಾಜದಲ್ಲಿ ಬೇರು ಬಿಟ್ಟಿದ್ದ ಅನೇಕ ಅನಿಷ್ಟ ಪದ್ಧತಿಗಳನ್ನು ತಿದ್ದಲು ಪ್ರಯತ್ನಿಸಿದರು.

ಒಟ್ಟಾರೆ ಕನ್ನಡ ಸಣ್ಣಕಥಾ ಸಾಹಿತ್ಯ ಪರಂಪರೆ ನವೋದಯ ಪೂರ್ವದಲ್ಲಿ ಜನಿಸಿ ನಂತರ ನಾಲ್ಕು ಸಾಹಿತ್ಯ ಘಟ್ಟದಲ್ಲಿ ಸಾಗಿಬಂದು ಇಂದು ಕನ್ನಡ ಸಾಹಿತ್ಯದಲ್ಲಿ ತನ್ನದೇ ಆದಂತಹ ವಿಶಿಷ್ಠ ಸ್ಥಾನವನ್ನು ಪಡೆದುಕೊಂಡಿದೆ. ಪ್ರತಿಯೊಂದು ಘಟ್ಟದಲ್ಲಿಯೂ ತನ್ನದೇ ಆದ ಹೊಸ ಹೊಸ ಅಂಶವನ್ನು ಭಿತ್ತರಿಸುತ್ತಾ ಕನ್ನಡ ಸಾಹಿತ್ಯ ತನ್ನದೇ ಆದ ವಿಶಿಷ್ಠ ಸ್ವರೂಪವನ್ನು ಪಡೆದು ಇಂದು ಸಣ್ಣಕತೆ ಒಂದು ಪ್ರಕಾರವಾಗಿ ಬೆಳೆದುನಿಂತಿದೆ ಎಂದರೆ ತಪ್ಪಾಗಲಾರದು.

* * * * *

# ಅಡಿ ಟಿಪ್ಪಣಿ

೧) ಮಾಸ್ತಿ ಸಣ್ಣಕತೆಗಳ ಸಮೀಕ್ಷೆ– ೩ ದತ್ತಿ ಉಪನ್ಯಾಸಗಳು– ಬಿ.ಎಂ.ಶ್ರೀ. ಸ್ಮಾರಕ ಪ್ರತಿಷ್ಠಾನ

೨) ಜಿ.ಎಸ್.ಆಮೂರ – ಕನ್ನಡ ಕಥನ ಸಾಹಿತ್ಯ ; ಸಣ್ಣಕತೆ– ಪುಟಸಂಖ್ಯೆ–೧೩

೩) ಡಾ.ಕರೀಗೌಡ ಬೀಚನಹಳ್ಳಿ–ಶತಮಾನದ ಸಣ್ಣಕತೆಗಳ ಸಮೀಕ್ಷೆ–ಪುಟಸಂಖ್ಯೆ ೪೫

೪) ಡಾ.ಕರೀಗೌಡ ಬೀಚನಹಳ್ಳಿ–ಶತಮಾನದ ಸಣ್ಣಕತೆಗಳ ಸಮೀಕ್ಷೆ–ಪುಟಸಂಖ್ಯೆ ೧೫

೫) ಜಿ.ಹೆಚ್ ನಾಯಕ–ಅನಿವಾರ್ಯ–ಪುಟಸಂಖ್ಯೆ–೪೭

೬) ಜಿ.ಹೆಚ್ ನಾಯಕ–ಅನಿವಾರ್ಯ–ಪುಟಸಂಖ್ಯೆ–೪೮

೭) ಕೀರ್ತಿನಾಥ ಕುರ್ತಕೋಟಿ–ಯುಗಧರ್ಮ ಮತ್ತು ಸಾಹಿತ್ಯ ದರ್ಶನ–ಪುಟ ಸಂಖ್ಯೆ ೧೪೯

೮) ಜಿ.ಎಸ್.ಆಮೂರ – ಕನ್ನಡ ಕಥನ ಸಾಹಿತ್ಯ ; ಸಣ್ಣಕತೆ – ಪುಟಸಂಖ್ಯೆ–೬೬

೯) ಜಿ.ಎಸ್.ಆಮೂರ – ಕನ್ನಡ ಕಥನ ಸಾಹಿತ್ಯ ; ಸಣ್ಣಕತೆ – ಪುಟಸಂಖ್ಯೆ–೬೭

೧೦) ಜಿ.ಹೆಚ್ ನಾಯಕ–ಅನಿವಾರ್ಯ–ಪುಟಸಂಖ್ಯೆ–೫೨

೧೧) ಶ್ರೀವತ್ಸ ಅನಂತ ಪದ್ಮರಾವ್, ಎಚ್.ಎಂ.ಚನ್ನಯ್ಯ (ಸಂ)–ಆಸ್ವಾದ–ಪುಟಸಂಖ್ಯೆ–೪೯

೧೨) ಶ್ರೀವತ್ಸ ಅನಂತ ಪದ್ಮರಾವ್, ಎಚ್.ಎಂ.ಚನ್ನಯ್ಯ (ಸಂ)–ಆಸ್ವಾದ–ಪುಟಸಂಖ್ಯೆ–೫೮

## ಅಧ್ಯಾಯ-೩

## ಎಂ.ವಿ.ಸೀ.ಯವರ ಸಣ್ಣಕತೆಗಳ ಸ್ವರೂಪ

ಆಧುನಿಕ ಕನ್ನಡ ಸಾಹಿತ್ಯದ ಪ್ರಮುಖ ಘಟ್ಟಗಳಲ್ಲಿ ನವೋದಯ ತುಂಬಾ ಗಮನಾರ್ಹವಾದದ್ದು. ಇಂಗ್ಲೀಷಿನ ಶಿಕ್ಷಣದಿಂದ ಆಂಗ್ಲ ಸಾಹಿತ್ಯದ ಸಂಪರ್ಕ ಕನ್ನಡದಲ್ಲಿ ಹೊಸ ನೀರು ಹರಿಯಲು ಸಾಧ್ಯವಾಯಿತು. ಕನ್ನಡ ಸಾಹಿತ್ಯದಲ್ಲಿ ಇಂಗ್ಲೀಷಿನ "ರೊಮ್ಯಾಂಟಿಸಂ" ಗೆ ಸಂವಾದಿಯಾಗಿ ಕನ್ನಡದಲ್ಲಿ 'ನವೋದಯ' ಎಂದು ಕರೆಯುತ್ತಾರೆ.

ನವೋದಯ ಸಾಹಿತ್ಯದಲ್ಲಿ ಭಾವುಕತೆ, ನೈತಕದೃಷ್ಟಿ, ಕನಸುಗಾರಿಕೆ, ಅತೀಂದ್ರಿಯ ಗ್ರಹಿಕೆ, ಗೇಯ, ಶೈಲಿ, ಒಟ್ಟಿನಲ್ಲಿ ಆಂಗ್ಲ ಸಾಹಿತ್ಯದ 'ರೊಮ್ಯಾಂಟಿಕ್' ಪ್ರಕಾರ ಕನ್ನಡದಲ್ಲಿ ತಲೆ ಎತ್ತಿತು. ಕನ್ನಡವು ತಲೆ ಎತ್ತುವ ಬಗೆ ಹೇಗೆ ಎಂಬ ಶ್ರೀ.ಯವರ ಕಳಕಳಿಯಂತೆ ಅದನ್ನು ಬೆಳೆಸಲು ಅನೇಕ ಜನ ಲೇಖಕರು ಮುಂಚೂಣಿಗೆ ಬಂದರು. ಇದೇ ಸಂದರ್ಭದಲ್ಲಿ ರಾಷ್ಟ್ರ ಜೀವನದಲ್ಲೂ ಸ್ವಾತಂತ್ರ್ಯ ಚಳುವಳಿಗಳು, ಆಂದೋಲನಗಳು ಜರುಗುತ್ತಿದ್ದವು.

ಬ್ರಹ್ಮ ಸಮಾಜ, ಆರ್ಯ ಸಮಾಜ ಮುಂತಾದ ಸಂಘ-ಸಂಸ್ಥೆಗಳು ರಾಜಾರಾಂ ಮೋಹನರಾಯ್, ರಾಮಕೃಷ್ಣ ಪರಮಹಂಸ, ಸ್ವಾಮಿ ವಿವೇಕಾನಂದ, ರವೀಂದ್ರನಾಥ ಠಾಗೂರ್, ಜ್ಯೋತಿ ಬಾ ಫುಲೆ, ಮಹಾತ್ಮ ಗಾಂಧಿ, ಡಾ. ಬಿ.ಆರ್.ಅಂಬೇಡ್ಕರ್ ಮುಂತಾದ ವಿವಿಧ ಬಗೆಯ ಚಿಂತಕರು, ದಾರ್ಶನಿಕರು ಭಾರತದ ಸಮಾಜದ ಮೇಲೆ ಜಾಗತಿಕ ಪ್ರಭಾವವನ್ನುಂಟು ಮಾಡಿದರು. ರಾಷ್ಟ್ರದ ಇತರ ಪ್ರದೇಶಗಳಂತೆ ಕನ್ನಡ ನಾಡು-ನುಡಿಯ ಮೇಲೂ ಪ್ರಭಾವ ಕಾಣಿಸಿಕೊಂಡಿತು. ಈಗಾಗಲೇ ತಿಳಿಸಿದಂತೆ ಕನ್ನಡ ನವೋದಯ ಕಾಲದ ಸಾಹಿತ್ಯಗಳು ಸತ್ಯ, ಸೌಂದರ್ಯ, ಶಿವ, ಪ್ರಕೃತಿ ಮುಂತಾದ ಆಧ್ಯಾತ್ಮ ವಿಚಾರಗಳಿಗೆ ತುಸು ಹೆಚ್ಚು ಒತ್ತುಕೊಟ್ಟವರಾಗಿ ಸಮಾಜದ ಒಳಿತಿನ ಬಗ್ಗೆ ಅಷ್ಟಾಗಿ ಗಮನ ನೀಡಲಿಲ್ಲವೇನೊ ಎಂದು ತಿಳಿದುಬರುತ್ತದೆ. ದ.ರಾ.ಬೇಂದ್ರೆ, ಕುವೆಂಪು, ಶಿವರಾಮ ಕಾರಂತರು, ಟಿ.ಪಿ.ಕೈಲಾಸಂ ಮುಂತಾದವರು ಸಮಾಜದ ದೋಷಗಳನ್ನು ನಿರ್ದಾಕ್ಷಿಣ್ಯವಾಗಿ ಖಂಡಿಸಿದ್ದಾರೆ. ನವೋದಯ ಕವಿಗಳು ಮಹಾನ್ ಮಾನವತಾವಾದಿಗಳು ಮತ್ತು ವಿಚಾರಶೀಲರೂ ಆಗಿದ್ದಾರೆ. ಇದಕ್ಕೆ ಕುವೆಂಪು ಮತ್ತು ಶಿವರಾಮ ಕಾರಂತರು ಉತ್ತಮ ಉದಾಹರಣೆಯಾಗಿದ್ದಾರೆ.

ನವೋದಯ ಸಾಹಿತ್ಯ ಉದಯದೊಂದಿಗೆ ಭಾವಗೀತೆ ಉದಯವಾಯಿತು. ಆನಂತರ ಕಾದಂಬರಿ, ಸಣ್ಣಕತೆ, ವಿಮರ್ಶೆ, ಪ್ರಬಂಧ, ಕಾವ್ಯ ಮುಂತಾದ ಸಾಹಿತ್ಯ ನವೋದಯ ಸಂದರ್ಭದಲ್ಲಿ ವಿಪುಲವಾಗಿ ಹುಟ್ಟಿಬಂದಿತು. ಇಂತಹ ಸಂದರ್ಭದಲ್ಲಿ ಭಾವಗೀತೆಯ ನಂತರ ಜನಪ್ರಿಯವಾದ ಸಾಹಿತ್ಯವೆಂದರೆ ಸಣ್ಣಕತೆಯಾಗಿದೆ. ಸಣ್ಣಕತೆ ಮಾಸ್ತಿಯವರಿಂದ ಜನಪ್ರಿಯವಾಗಿ ಒಂದು ನಿರ್ದಿಷ್ಟ ರೂಪು-ರೇಷೆಗಳನ್ನು ಪಡೆದುಕೊಂಡು ಆನಂತರ ಅನೇಕ ಸಣ್ಣಕತೆಗಾರರು ಸಣ್ಣಕತೆಗಳನ್ನು ಬರೆದರು. ಅಂತಹವರ ಸಾಲಿನಲ್ಲಿ ಎಂ.ವಿ.ಸೀ. ಒಬ್ಬರಾಗಿದ್ದಾರೆ.

ಎಂ.ವಿ.ಸೀ ರವರು ನವೋದಯ ಮತ್ತು ಪ್ರಗತಿಶೀಲ ಸಾಹಿತ್ಯದ ಮಧ್ಯಭಾಗದಲ್ಲಿ ಕಂಡುಬರುವಂತಹವರು. ಅವರು ತಮ್ಮ ಸಾಹಿತ್ಯದ ಮೂಲಕ ಸಮಾಜದ ಲೋಪ-ದೋಷಗಳನ್ನು ತಿದ್ದಲು ಪ್ರಯತ್ನಿಸಿದರು. ಅವರು ಅಂದು ಸಮಾಜದ ಲೋಪದೋಷಗಳನ್ನು ನಿರ್ದಾಕ್ಷಿಣ್ಯವಾಗಿ ಖಂಡಿಸಲು ಅವರಿಗೆ ಅಂದಿನ ಪರಿಸ್ಥಿತಿ ಅಂದರೆ ಜಾತಿ, ಧರ್ಮದ ಸಮಸ್ಯೆಗಳು ಅವರನ್ನು ಎಡಬಿಡದೇ ಕಾಡುತ್ತಿದ್ದವು. ಅವರ ಸಾಹಿತ್ಯದಲ್ಲಿ ಸಮಾಜದಲ್ಲಿ ಕಂಡುಬರುವ ಲೋಪ-ದೋಷಗಳನ್ನು ತೋರಿಸುವ ಅದಕ್ಕೆ ಸಾಧ್ಯವಾದಷ್ಟು ಪರಿಹಾರವನ್ನು ದೊರಕಿಸಿಕೊಡುವಂತೆ ಮಾಡಿದರು. ಆದರೆ ಅಂದಿನ ಪರಿಸ್ಥಿತಿಯಲ್ಲಿ ಇದು ನನ್ನೊಬ್ಬನ ಪರಿಸ್ಥಿತಿಯಲ್ಲ, ನನ್ನಂತಹ, ದೊಡ್ಡ ಅಗ್ರಪಂಕ್ತಿಗೆ ಸೇರಿದ ದೊಡ್ಡ ಲೇಖಕರಿಗೂ ಸಹ ಇಂತಹ ಒತ್ತಡಗಳಿದ್ದವು ಎಂಬ ಮಾತನ್ನು ಆಸ್ವಾದ ಗ್ರಂಥದಲ್ಲಿ ಹೇಳಿದ್ದಾರೆ.

ಸಣ್ಣಕತೆಯ ಸ್ವರೂಪ ಲಕ್ಷಣಗಳನ್ನು ವಿದ್ವಾಂಸರ ಅಭಿಪ್ರಾಯಗಳನ್ನು ಗಮನಿಸಿ ಈ ಕೆಳಗಿನಂತೆ ಪಟ್ಟಿ ಮಾಡಬಹುದು. ಸಂಕ್ಷಿಪ್ತತೆ, ವಾಸ್ತವತೆ, ಕಲಾತ್ಮಕತೆ ಪಾತ್ರಗಳ ಮಿತವ್ಯಯ, ಏಕರೂಪ ತಂತ್ರ, ಪಾತ್ರಗಳ ನೇರ ಸಂಬಂಧ ಸ್ಪಷ್ಟತೆ ಒಂದೇ ರೀತಿಯ ಭಾಷಾ ಬಳಕೆ ಹಾಗೂ ಪರಿಣಾಮಕಾರಿ ಅಂತ್ಯ ಇವು ಸಣ್ಣಕತೆಯ ಸ್ಥೂಲ ಲಕ್ಷಣಗಳೆಂದು ಹೇಳಿದರೂ, ಒಂದು ಕತೆಯಲ್ಲಿ ಈ ಎಲ್ಲಾ ಲಕ್ಷಣಗಳೂ ಇರಬೇಕೆಂಬ ಕಡ್ಡಾಯವಿಲ್ಲ. ಅದು ಲೇಖಕನಿಗೆ ಬಿಟ್ಟ ವಿಷಯ.

ಎಂ.ವಿ.ಸೀ ರವರ ಕತೆಗಳನ್ನು ಸ್ವರೂಪದ ದೃಷ್ಟಿಯಿಂದ ನೋಡುವುದಾದರೆ ಇವರ ಸಣ್ಣಕತೆಗಳು ಒಂದೊಂದು ದೃಷ್ಟಿಯಿಂದ ನೋಡಿದಾಗ ಓದುಗರಿಗೆ ಬೇರೆ-ಬೇರೆ ದೃಷ್ಟಿಯಲ್ಲಿ ಗೋಚರಿಸುತ್ತವೆ. ಅವರು ಸಮಾಜದಲ್ಲಿ ತಮಗೆ ಗೋಚರಿಸುವಂತಹ ಅನೇಕ ಪ್ರಸಂಗಗಳನ್ನು ತಮ್ಮ ಲೇಖನಯಲ್ಲಿ ಕಥೆಗಳಾಗಿ ಪರಿಣಮಿಸಿದ್ದುಂಟು ಅದರಲ್ಲಿ ಕೆಲವೊಂದು ಸಣ್ಣಕತೆಗಳು ಅವರು ಕಂಡ ಘಟನೆ ಇರಬಹುದು, ಜೀವನ ಕ್ರಮ ಇರುಬಹುದು. ಸಾಂಸಾರಿಕ ಜೀವನ, ಬಡತನ, ಕಷ್ಟ-ಕಾರ್ಪಣ್ಯ ಇರಬಹುದು ಇವನ್ನು ಕಥೆಯ ರೂಪದಲ್ಲಿ ಕಟ್ಟಿಕೊಡುವುದು ಅವರ ಗುಣವಿಶೇಷವಾದದ್ದು.

ಅವರು ಸಣ್ಣಕತೆಗಳನ್ನು ಬರೆಯುವುದಕ್ಕಿಂತಲೂ ಮೊದಲು ಹರ್ತಾರ್ನಿನ ಕೆಲವೊಂದು ಸಣ್ಣಕತೆಗಳನ್ನು ಕನ್ನಡಕ್ಕೆ ಅನುವಾದ ಮಾಡಿದರು. ತದನಂತರ ಅವರ ಮೇಲೆ ಹೆಚ್ಚು ಪ್ರಭಾವ ಬೀರುವಂತದ್ದು. ಎಸ್.ಎಸ್.ಎಲ್.ಸಿ ಯಲ್ಲಿ ಓದುವಾಗ ಮಾಸ್ತಿಯವರ ಕೆಲವು ಕಥೆಗಳು ಅವರಿಗೆ ಪಠ್ಯ ಪುಸ್ತಕವಾಗಿದ್ದವು. ಈ ಕತೆಗಳಿಂದ ಪ್ರೇರೇಪಿತರಾದವರಲ್ಲಿ ಎಂ.ವಿ.ಸೀ ಯವರು ಒಬ್ಬರಾಗಿದ್ದಾರೆ. ನವೋದಯ ಸಾಹಿತ್ಯದಲ್ಲಿ ಕಂಡುಬರುವ ಎಲ್ಲಾ ಸಣ್ಣಕತೆಗಾರರ ಮೇಲೆ ಮಾಸ್ತಿಯವರ ಪ್ರಭಾವವಿದೆ. ಎಂ.ವಿ.ಸೀ ಯವರು ಯಾವ ಕಾಲಘಟ್ಟಕ್ಕೂ ಸೀಮಿತವಾಗದೇ ತಮಗೆ ರುಚಿಸಿದಂತೆ ಸಣ್ಣಕತೆಗಳನ್ನು ಬರೆದಿದ್ದಾರೆ.

ಅವರ ಕೆಲವು ಕಥೆಗಳು ಉದಾತ್ತತೆಯನ್ನು ನಿರೂಪಿಸುವಾಗ ಕೇವಲ ಉನ್ನತ ಗುಣಗಳು ರಾಮ, ಶಿವ, ಕೃಷ್ಣರಲ್ಲಿ ಮಾತ್ರ ಕಾಣುತ್ತೇವೆ. ಅಲ್ಲದೆ ಸಮಾಜದ ಉನ್ನತ ವರ್ಗದಲ್ಲಿ ವಾಸಿಸುತ್ತಿರುವ ಜನರಲ್ಲಿ ಮಾತ್ರ ಕೆಲವೊಂದು ಉದಾತ್ತತೆಯ ಗುಣಗಳಿರುತ್ತವೆ ಎಂಬ ಕಲ್ಪನೆಯಿತ್ತು. ಆದರೆ ಲೇಖಕರು ಇಂತಹ ಒಳ್ಳೆಯ ಗುಣಗಳು ನಮ್ಮ ಜೊತೆಯಲ್ಲಿ ಬದುಕುತ್ತಿರುವ ಸಾಮಾನ್ಯ ಬಡಕುಟುಂಬದವರಲ್ಲೂ, ಕೆಳವರ್ಗದವರಲ್ಲೂ ಇಂತಹ ಒಳ್ಳೆಯ ಅಥವಾ ಶ್ರೇಷ್ಠ ಗುಣಗಳಿರುತ್ತವೆ ಎಂಬುದನ್ನು ಅವರು ತಮ್ಮ ಸಣ್ಣಕತೆಗಳ ಮೂಲಕ ಕಟ್ಟಿಕೊಡುತ್ತಾರೆ.

ಸಾಮಾನ್ಯ ಮನುಷ್ಯರಲ್ಲೂ ಉದಾತ್ತತೆ ಗುಣ ಇರುತ್ತದೆ. ಸಾಮಾನ್ಯ ಮನುಷ್ಯರಲ್ಲೂ ಸಹ ರಾಮ, ಶಿವ, ಕೃಷ್ಣರಲ್ಲಿ ಇದ್ದಂತಹ ಶ್ರೇಷ್ಠ ಗುಣಗಳಿರುತ್ತವೆ ಎಂಬುದನ್ನ ತೋರಿಸಿದರು. ಅಂತಹ ಕಥೆಗಳೆಂದರೆ ನೂರನಲವತ್ತೆರಡು, ಹೆತ್ತವರ ಪುಣ್ಯ, ನಿಷ್ಪ್ರಯೋಜಕ, ಆ ಚೋಟುದ್ದ ಹುಡುಗ, ಕರುಣೆ ಮುಂತಾದ ಕಥೆಗಳಲ್ಲಿ ಇಂತಹ ಉದಾತ್ತ ಗುಣಗಳನ್ನು ಕಾಣಬಹುದು ಎಂಬುದನ್ನು ತೋರಿಸಿದ್ದಾರೆ.

'ನೂರನಲವತ್ತೆರಡು' ಎಂಬುದು ಮೇಲ್ನೋಟಕ್ಕೆ ಒಂದು ಸಂಖ್ಯೆಯನ್ನು ಸೂಚಿಸುವಂತೆ ಕಂಡುಬಂದರೂ ಅದರ ಒಳಹೊಕ್ಕು ನೋಡಿದರೆ ಇದು ತುಂಬಾ ಅರ್ಥಪೂರ್ಣವಾದ ಕತೆಯಾಗಿದೆ. ಈ ಕತೆಯ ಹೆಸರು ಜಟಕಾ ಗಾಡಿಯ ನಂಬರನ್ನು ಕುರಿತು ತಿಳಿಸುವಂತಹದ್ದು. ಈ ಕತೆಯಲ್ಲಿ ನಿರೂಪಕನೇ ಕಥೆಯ ನಾಯಕನಾಗಿ ನಡೆಸಿಕೊಂಡು ಹೋಗುವಂತಹದ್ದು ಕಂಡುಬರುತ್ತದೆ. ಒಬ್ಬ ಜಟಕಾ ಗಾಡಿಯನ್ನು ಓಡಿಸುವ ಮುಸ್ಲಿಂ ವ್ಯಕ್ತಿ ಅವನಲ್ಲಿ ಒಳ್ಳೆಯತನ ನಮಗೆ ಕಾಣುತ್ತದೆ. ಕಥೆ ಹೇಳುವವನು ಅವನ ಗಾಡಿಯಲ್ಲಿ ಕುಳಿತು ಬಂದುಬಿಟ್ಟಿದ್ದಾನೆ. 'ಎರಡು ಆಣೆ ಕೊಡಬೇಕು, ಜೇಬಿನಲ್ಲಿ ಮೂರು ಕಾಸಿಲ್ಲ' ತುಂಬಾ ಸಂಕೋಚದಿಂದ ನೋಡಿ ಸಾಹೇಬರೇ ಕೋಟು ಬದಲಾಯಿಸಿ ಹಾಕಿಕೊಳ್ಳುವ ಕಾಟದಲ್ಲಿ ಪರ್ಸನ್ನು ತೆಗೆದುಕೊಂಡು ಜೇಬಿಗೆ ಹಾಕಿಕೊಳ್ಳುವುದನ್ನು ಮರೆತುಬಿಟ್ಟೆ, ಎಂದು ವಿವರಣೆ ಹೇಳಿ, ಪುಸ್ತಕವನ್ನೋ, ಪೆನ್ನನ್ನೋ ತಗೆದುಕೊಳ್ಳಿ ಅಥವಾ ನನ್ನನ್ನೂ ಮನೆಗೆ ಕರೆದುಕೊಂಡು ಹೋಗಿ ಹಣ ಕೊಡುತ್ತೇನೆ ಎನ್ನುತ್ತಾನೆ. ಸಾಬಿ ನಿಮಗೇನು ಬುದ್ದಿ-ಗಿದ್ದಿ ಐತೋ ಇಲ್ಲವೋ ಸ್ವಾಮಿ? ಎಂದು ಪ್ರಾರಂಭಿಸಿದಾಗ ಇನ್ನೂ ಬೈಗುಳಗಳ ಮಳೆ ಪ್ರಾರಂಭ ಎಂದು ಬೆದರುತ್ತಾನೆ. "ಸಾಬಿ ನನಗೆ ಬರಬೇಕಾದದ್ದು ಎರಡಾಣೆ, ಅದನ್ನು ನಿಮ್ಮ ಕೋಟು, ಪೆನ್ನು ತೆಗೆದುಕೊಳ್ಳೋದು ನ್ಯಾಯ ಅಲ್ಲ. ನನ್ನ ಪ್ರಾಣನೇ ತೆಗೋ ಅಂತೀರಿ, ಎರಡಾಣೆ ಮೇಲೆ ಒಂದು ಕಾಸು ತೆಗೆದುಕೊಂಡರೆ ಅಲ್ಲಾ ನನ್ನ ಮನೆ ಸುಟ್ಟು ಬೂದಿ ಮಾಡಾನು". ೧ ಎನ್ನುತ್ತಾನೆ. ನನ್ನ ಹಣ ಇನ್ನು ಎಂದಾದರೂ ಕೊಡಿ ಎನ್ನುತ್ತಾನೆ. ಆದರೆ ಇಲ್ಲಿ ಒಬ್ಬ ಸಾಮಾನ್ಯ ಮನುಷ್ಯನಲ್ಲಿ ಎಂತಹ ಉದಾತ್ತತೆಯ ಸ್ವರೂಪ ಕಂಡುಬರುತ್ತದೆ. ಅಲ್ಲದೆ ಅವನು ಇಲ್ಲಿ ಯಾವ ವಸ್ತುವಿಗೂ ಆಸೆ ಪಡದೆ ನನಗೆ ಬರಬೇಕಾದದ್ದು ಎರಡಾಣೆಗೆ ನಾನು ನಿಮ್ಮ ಕೋಟು, ಪೆನ್ನು ಇವನ್ನೆಲ್ಲಾ ತೆಗೆದುಕೊಂಡರೆ ಅಲ್ಲಾ ಮೆಚ್ಚಾನಾ ಎನ್ನುವಂತಹ ಮಾತು ಅರ್ಥಪೂರ್ಣವಾದದ್ದು. ಕೊನೆಯಲ್ಲಿ ಎರಡಾಣೆ ಮೇಲೆ ಒಂದು ಕಾಸು ತೆಗೆದುಕೊಂಡರೂ

ಅಲ್ಲಾ ನನ್ನ ಮನೆಯನ್ನು ಸುಟ್ಟು ಬೂದಿ ಮಾಡನೂ ಎನ್ನವಂತಹ ನುಡಿಗಳು ಅವನ ಪ್ರಮಾಣಿಕತೆಯ ಗುಣಗಳನ್ನು ಉನ್ನತ ಮಟ್ಟಕೇರುವಂತೆ ಮಾಡುತ್ತವೆ.

ಈ ಕಥೆಯಲ್ಲಿ ಸಾಬಿ ಬಡವನಾದರೂ ಸಹ ಎಂತಹ ಉದಾರಿಯಾಗಿ ಕಂಡುಬರುತ್ತಾನೆ. ಎಂ.ವಿ.ಸೀ. ರವರ ಕಥೆಗಳಲ್ಲಿ ಕೆಲವೊಂದು ಉತ್ತಮ ಗುಣಗಳು ಮೇಲ್ವರ್ಗದಲ್ಲಿ ಮಾತ್ರ ಕಂಡುಬರದೆ ಸಾಮಾನ್ಯ ಮನುಷ್ಯರಲ್ಲೂ ಉತ್ತಮ ಗುಣಗಳಿರುತ್ತವೆ ಎಂಬುದನ್ನು ಸ್ವಾರಸ್ಯ ಕೆಡದ ಹಾಗೆ ರಚಿಸಿದ್ದಾರೆ.

ಇಂತಹದೆ ಉದಾತ್ತತೆಯನ್ನು ಕಟ್ಟಿಕೊಡುವಂತಹ ಮತ್ತೊಂದು ಕತೆಯೆಂದರೆ 'ಹೆತ್ತವರ ಪುಣ್ಯ' ಈ ಕತೆಯಲ್ಲಿ ಮಾದಯ್ಯ ಕಡುಬಡವನಾಗಿದ್ದನು. ಈತ ಯಾವುದೋ ಕಛೇರಿಯಲ್ಲಿ 'ಡಿ' ದರ್ಜೆ ನೌಕರನಾಗಿ ಕೆಲಸ ನಿರ್ವಹಿಸುತ್ತಿದ್ದನು. ಮಾದಯ್ಯನಿಗೆ ಜೀವನ ನಡೆಸುವುದದೇ ತುಂಬಾ ಕಷ್ಟಕರವಾಗಿತ್ತು. ಒಂದು ಸಾರಿ ಅವನ ಮಗನಿಗೆ ಪರೀಕ್ಷೆಗೆ ಫೀಸು ಕಟ್ಟಬೇಕಾಗಿರುತ್ತದೆ. ಮಾದಯ್ಯನ ಹತ್ತಿರ ಹಣವಿರುವುದಿಲ್ಲ. ಅವನು ಎಲ್ಲಾ ಕಡೆ ವಿಚಾರಿಸಿದರೂ ಅವನಿಗೆ ಎಲ್ಲೂ ಸಾಲ ದೊರೆಯುವುದಿಲ್ಲ. ಕೊನೆಗೆ ಹೆಂಡತಿಯ ಓಲೆಯನ್ನು ಮಾರುವುದು ಒಂದೇ ದಾರಿ ಎಂದು ತಿಳಿದು ಶ್ರೀಕಂಠಯ್ಯನವರಿಗೆ ಮಾದ ಹೀಗೆ ಹೇಳುತ್ತಾನೆ. "ನಾನು ನನ್ನ ಹೆಂಡತಿಯ ಓಲೆಯನ್ನು ಕೇಳಿದರೆ, ಅವಳು ಗಂಡ ಎಲ್ಲೋ ಜೂಜಾಡುತ್ತಾನೆ, ಹಾದರ ಮಾಡುತ್ತಾನೆ, ಅದಕ್ಕೆ ಓಲೆ ಕೇಳುತ್ತಾನೆ ಅಂದುಕೊಳ್ತಾಳೆ. ನಿಮ್ಮ ಮಾತು ಎಂದರೆ ದೇವರ ಮಾತು ತಪ್ಪು ತಿಳಿದುಕೊಳ್ಳೋದಿಲ್ಲ, ಕೊಟ್ಟುಕೊಡ್ತಾಳೆ. ಎನ್ನುವಲ್ಲಿ ಅವನಿಗೆ ಹೆಂಡತಿಯ ಬಗ್ಗೆ ಯಾವ ರೀತಿಯ ಅಭಿಮಾನವನ್ನು ಇಟ್ಟಕೊಂಡಿದ್ದಾನೆ ಎಂಬುದು ತಿಳಿಯುತ್ತದೆ.

ಮಾದಯ್ಯನ ಹೆಂಡತಿ "ನನ್ನ ಗಂಡನಿಗೆ ವಸಿ ಬುದ್ದಿ ಹೇಳಿ ನನ್ನೊಡೆಯಾ ಈಟೊಂದು ಅಪನಂಬಿಕೆ ಆದರೆ ಹ್ಯಾಗೆ? ಅವನೇ ಕೇಳಿದರೆ ನಾನು ಕೊಡ್ತಾ ಇರಲಿಲ್ವ? ಓಲೆ ಅಲ್ಲ, ಕಿವಿ ಕೊಯ್ದು ಕೊಡು ಅಂದಿದ್ದರೂ ಕೊಡ್ತಾಯಿದ್ದೆ ನಮಗೋಸ್ತ್ರ ಅವರು ಜೀವ ತೇಯ್ತಾ ಇಲ್ವಾ? ಎನ್ನುತ್ತಾಳೆ". ೨

ಮಾದಯ್ಯನ ಸಂಸಾರ ಕಷ್ಟದಲ್ಲಿದ್ದರೂ ಅವಳು ಮಾತನಾಡುವ ಮಾತುಗಳಿಂದ ಅವಳ ಗುಣಗಳು ಕಂಡುಬರುತ್ತದೆ. ಯಾವುದೇ ಮನೆಯ ಹೆಣ್ಣಾದರೂ ಈ ಮಾತುಗಳನ್ನಾಡುವುದು ಕಷ್ಟ ಎಂತಹ ಉದಾತ್ತತೆಯ ಗುಣಗಳು ಮಾದಯ್ಯನ ಹೆಂಡತಿಯಲ್ಲಿ ಗೋಚರಿಸುತ್ತದೆ ಎಂಬುದನ್ನು ಕತೆಗಾರರು ಚಿತ್ರಿಸಿದ್ದಾರೆ. ಅವರ ಕಥೆಗಳಲ್ಲಿ ಎಲ್ಲೂ ಊಹೆಗೆ ಅವಕಾಶವಿರುವುದಿಲ್ಲ. ಅವರ ಪ್ರತಿಯೊಂದು ಸಣ್ಣಕತೆಗಳು ವಾಸ್ತವಾಂಶವನ್ನು ಬಿಂಬಿಸುವಂತೆ ಚಿತ್ರಿತವಾಗಿರುತ್ತವೆ. ಅವು ಎಲ್ಲೂ ಗೊಂದಲಗಳಿಗೆ ಆಸ್ಪದವನ್ನು ಕೊಡುವುದಿಲ್ಲ.

ಈ ರೀತಿಯ ಉತ್ತಮ ಗುಣಗಳನ್ನು ಪ್ರಕಟಿಸುವಂತ ಕತೆ ನಿಷ್ಪ್ರಯೋಜಕ. ಇದು ಒಂದು ದೇಶಪ್ರೇಮವನ್ನು ಪ್ರಕಟಿಸುವಂತ ಕಥೆಯಾಗಿದೆ. ಇದು ಹಳೆಯ ವಸ್ತುವನ್ನೇ ಉಳ್ಳ ಹಳೆಯ

ಕತೆಯಂತೆ ತೋರಿದರೂ ಮೋಹಕ ಶೈಲಿಯ ಮರೆಯಲ್ಲಿ ಅದು ಉದುಗಿ ಹೋಗುತ್ತದೆ. ಕಥೆಯ ನಾಯಕ ಸೀನ ಯಾವ ಕೆಲಸಕ್ಕೂ ಬಾರದವನೆನಿಸಿ ಕೊನೆಗೆ ಸ್ವಾತಂತ್ರ್ಯ ಸಂಗ್ರಾಮದಲ್ಲಿ ಪಾಲ್ಗೊಂಡು ಹುತಾತ್ಮನಾಗಿ 'ಸೀನಪ್ಪ' ತನ್ನ ಬಾಳಿಗೆ ಸಾರ್ಥಕ್ಯ ಪಡೆದುಕೊಂಡುದೆ ಈ ಕಥೆಯ ಸ್ವರೂಪ.

ಎಂ.ವಿ.ಸೀ ಅವರ ಹಲವು ಕಥೆಗಳು ಕಷ್ಟ, ದುಃಖ, ಹಸಿವು, ಬಡತನ ಇಂತಹ ಸಮಸ್ಯೆಗಳಿಂದ ಪ್ರಾರಂಭವಾಗಿ ಕೆಲವು ಕಥೆಗಳು ದುಃಖಾಂತದಲ್ಲಿ ಕೊನೆಗೊಳ್ಳುತ್ತವೆ. ಅಂತಹ ಕಥೆಗಳೆಂದರೆ ಪೆಪ್ಪರಮೆಂಟು, ಆ ಚೋಟುದ್ದ ಹುಡುಗ. ಈ ಕತೆಗಳಲ್ಲಿ ಕಾಣುವ ಬಡತನ ಚಿತ್ರಣ ದಿನನಿತ್ಯ ನಮಗೆ ಎದುರಾಗುವಂತ ಘಟನೆಗಳಾಗಿರುತ್ತವೆ. ಪೆಪ್ಪರಮೆಂಟು ಕಥೆಯಲ್ಲಿ ಬಡತನ, ಹಸಿವಿನ ದಾಹ ತುಂಬಿಕೊಂಡಿರುವಂತದ್ದು. ಒಬ್ಬ ವ್ಯಕ್ತಿ ತನ್ನ ಹಸಿವನ್ನು ನೀಗಿಸಿಕೊಳ್ಳಲು ಅವನ ಮನಸ್ಸು ನಾನಾ ರೀತಿ ಆಲೋಚನೆ ಮಾಡುತ್ತದೆ. ಅದೇ ರೀತಿ ಕುಳ್ಳಯ್ಯನ ಮನಸ್ಸಿನಲ್ಲಿ ನಾನಾ ರೀತಿಯ ಆಲೋಚನೆಗಳು ಸುಳಿದಾಡುತ್ತವೆ. ಕಳ್ಳತನ ಮಾಡಲು ಅವನ ಮನಸ್ಸು ಒಪ್ಪುವುದಿಲ್ಲ, ಭಿಕ್ಷೆ ಬೇಡುವುದಕ್ಕೂ ಅವನಿಗೆ ನಾಚಿಕೆ, ಕೊನೆಗೆ ಹಸಿವನ್ನು ತಾಳಲಾರದೆ ಭಿಕ್ಷೆ ಬೇಡುತ್ತಾನೆ. ಯಾರೂ ಅವನಿಗೆ ಭಿಕ್ಷೆ ಕೊಡುವುದಿಲ್ಲ. ಕೊನೆಗೆ ಯಾರೋ ಎರಡಾಣೆ ಕೊಡುತ್ತಾರೆ. ಅದನ್ನು ಅಂಗಡಿಯವನಿಗೆ ಕೊಟ್ಟರೆ ಎರಡು ಪೆಪ್ಪರಮೆಂಟನ್ನು ಕೊಡುತ್ತಾನೆ. ಕೊನೆಗೆ ಕುಳ್ಳಯ್ಯ ರಾತ್ರಿ ಮನೆಗೆ ಬರುವಾಗ ಹೆಂಡತಿ ಹೇಳಿದ ಮಾತುಗಳು ಅವನ ಮನಸನ್ನು ಕಲಕುತ್ತವೆ. ರಾತ್ರಿ ಅವನು ದಾರಿಯಲ್ಲಿ ನಡೆದುಕೊಂಡು ಬರುವಾಗ ಯಾರದೋ ಮನೆಯ ಬಾಗಿಲು ತೆಗೆದಿದ್ದನ್ನು ಕಂಡು ಕುಳ್ಳಯ್ಯ ಕಳ್ಳತನ ಮಾಡಲು ಹೋಗಿ ಕಾವಲುಗಾರನಿಗೆ ಸಿಕ್ಕಿ ಎಲ್ಲರಿಂದಲೂ ವದೆ ತಿನ್ನುತ್ತಾನೆ. ಮನೆಯ ಯಜಮಾನ ಶ್ರೀನಿವಾಸರಾಯರು ಅವನ ಸಮಸ್ಯೆಯನ್ನು ಕೇಳಿದಾಗ ಕುಳ್ಳಯ್ಯ ನಿಜಾಂಶವನ್ನು ಹೇಳುತ್ತಾನೆ. ಅವನನ್ನು ಪೋಲೀಸರಿಗೆ ಒಪ್ಪಿಸದೆ ಬಿಟ್ಟುಬಿಡುತ್ತಾರೆ. ಆದರೆ ಕುಳ್ಳಯ್ಯ ಇಲ್ಲಿ ಯಾವುದೇ ರೀತಿಯ ಬೆಲೆಬಾಳುವ ವಸ್ತುಗಳನ್ನು ಕದ್ದಿರುವುದಿಲ್ಲ. ಕೇವಲ ಅವನು ಹಸಿವನ್ನು ತೀರಿಸಿಕೊಳ್ಳುವುದಕ್ಕೆ ಒಂದು ಹಿಡಿ ಅಕ್ಕಿಯನ್ನು ಕದ್ದಿರುತ್ತಾನೆ. ಕುಳ್ಳಯ್ಯ ಇಲ್ಲಿ ಸ್ವಾಭಿಮಾನಿ. ಕೊನೆಗೆ ಅವನ ಕುಟುಂಬ ಸಾವಿನಲ್ಲಿ ಕೊನೆಗೊಳ್ಳುತ್ತದೆ.

ಆ ಚೋಟುದ್ದ ಹುಡುಗನ ಕತೆಯಲ್ಲೂ ಸಹ ಇಂತಹ ಬಡತನ ಚಿತ್ರಣ ನಿರೂಪಿತವಾಗಿದೆ. ಕತೆಯಲ್ಲಿ ಕಾಣುವ ಹುಡುಗ ಚುರುಕು ಸ್ವಭಾವ ಮತ್ತು ಬೂಟ್‌ಪಾಲಿಶ್ ಮಾಡಿ ಹೊಟ್ಟೆಹೊರಿಯುತ್ತಿದ್ದವನು. ನಿರೂಪಕನಿಗೆ ಅವನು ಪರಿಚಯವಾಗಿ ತುಂಬಾ ವಿಶ್ವಾಸಕ್ಕೆ ಅರ್ಹನಾಗುತ್ತಾನೆ. ಅವನು ಪ್ರತಿದಿನ ಎರಡಾಣೆ ದುಡಿದರೆ ಅವನಿಗೆ ಊಟ ಸಿಗುವಂತಹದ್ದು ನರೂಪಕರು ಅವನಿಗೆ ಸಹಾಯ ಮಾಡಲು ಆಗಾಗ ಅವನ ಹತ್ತಿರ ಬೂಟ್‌ಪಾಲಿಶ್‌ಗಾಗಿ ಬರುವಂತಹದ್ದು ಕಂಡುಬರುತ್ತದೆ. ಕೊನೆಗೆ ಆ ಹುಡುಗನ ಸುಳಿವು ಸಿಗುವುದಿಲ್ಲ. ಯಾರಿಂದಲೋ ಅವನ ಸಾವಿನ ಸುದ್ದಿ ತಿಳಿಯುತ್ತದೆ. ಹೀಗೆ ಬಡತನ, ಹಸಿವಿನ ಚಿತ್ರಣ ಕಥೆಗಳ ಸ್ವರೂಪದಲ್ಲಿ ಕಂಡುಬರುತ್ತವೆ.

ಎಂ.ವಿ.ಸೀ ಅವರ ಹಲವು ಕಥೆಗಳು ಪಾತ್ರಗಳು ಕಷ್ಟದಲ್ಲಿ ಮುಗಿಯುತ್ತವೆ. ಪರಿಹಾರ ದೊರೆತಾಗ ಬಹುಮಟ್ಟಿಗೆ ಅದು ಇತರ ಪಾತ್ರಗಳ ಒಳ್ಳೆಯತನದಿಂದಲೇ 'ನಿಲ್ದಾಣಗಳ ನಡುವೆ' ಯಂತಹ ಕಥೆಗಳಲ್ಲಿ ಆಕಸ್ಮಿಕ ಬಳಕೆ ಇದೆ. ಇದನ್ನು ಕಥೆಗಾರರು ಸಹಜವೆನ್ನುವಂತೆ ಮಾಡಲು ಎಷ್ಟೇ ಪ್ರಯತ್ನಿಸಿದರೂ ಕಥೆಯ ಗತಿ ತೀರ ಕೃತಕ. ಕಥೆಗಾರರು ತಿರುಚುತ್ತಿದ್ದಾರೆ ಎನ್ನಿಸುತ್ತದೆ. ಅಳುವಿನಲ್ಲಿ ಹೆಣ್ಣೊಬ್ಬಳು ಬಲಾತ್ಕಾರಕ್ಕೆ ಒಳಗಾಗಿ ಶೀಲವನ್ನು ಕಳೆದುಕೊಂಡಿದ್ದಾಳೆ ಅನಂತರ ಮದುವೆಯಾಗಿದೆ. ಆದರೆ ತನ್ನದು ಎಂಜಲು ಮೈ ಎನ್ನುವ ಭಾವ ಗಂಡನಿಗೆ ಮೋಸಮಾಡುತ್ತಿದ್ದೇನೆ ಎಂಬ ಸಂಕಟ ಅವಳ ಪಾಲಿಗೆ ಹಗಲು ರಾತ್ರಿ ಎಲ್ಲಾ ಅಳುವಿಗಾಗಿಯೇ ಇರುವುದು. ಅಳು ಅಳು ಅಳು! ಎಂದೇ ಕಥೆ ಪ್ರಾರಂಭವಾಗುತ್ತದೆ. ಕೊನೆಗೆ ಕಾಗದ ಬರೆದಿಟ್ಟು ಗಂಡನಿಗೆ ನಿಜಾಂಶ ತಿಳಿಸುತ್ತಾಳೆ. ಗಂಡ 'ನೀನಿರುವಂತೆಯೇ ಸ್ವೀಕರಿಸಲು ಸಿದ್ಧ' ಎಂದು ಹೇಳುತ್ತಾನೆ. ಒಂದು ವರ್ಷವಾದ ಮೇಲೆ ರಮೇಶನಿಗೆ ಅಳು ಕೇಳಿ ಬಂದಿತು. ರೋಹಿಣಿಯದಲ್ಲ, ಅವಳ ಹೆತ್ತ ತನ್ನ ಮಗುವಿನದ್ದು. ಇಲ್ಲಿ ಗಂಡ ಹೆಂಡತಿಯನ್ನು ಒಪ್ಪಿಕೊಳ್ಳುವುದು ಒಂದು ಗಮನಾರ್ಹವಾದ ಸಂಗತಿಯಾಗಿದೆ.

'ಮುರಿದ ಅಗಣಿ' ಕತೆಯಲ್ಲಿ ಪಾಕಿಸ್ತಾನದ ಹುಟ್ಟಿನ ಸ್ವಲ್ಪ ಮೊದಲು ಭಾರತದಲ್ಲಿ ನೆಡೆದ ನೆತ್ತರು ಸ್ನಾನದ ಸಂದರ್ಭದಲ್ಲಿ ನೆಡೆದ ಪ್ರಸಂಗವನ್ನು ನಿರೂಪಿಸುತ್ತದೆ ಅಥವಾ ಎರಡು ಪ್ರಸಂಗಗಳನ್ನು ನಿರೂಪಿಸುತ್ತದೆ. ಒಂದು ಮತ್ತೊಂದರ ಶಿಶು. ಬಡ ಜಟಕಾ ಸಾಹೇಬನ ಹತ್ತಿ ಉರಿಯುತ್ತಿರುವ ದ್ವೇಷಾಗ್ನಿಯ ಮಧ್ಯೆ ತನ್ನ ಯಜಮಾನನ ಮಗಳನ್ನು ಸಂರಕ್ಷಿಸಿ ತನ್ನ ಪರಿಚಯದ ಒಬ್ಬರ ಮನೆಗೆ ರಾತ್ರಿ ಮುಟ್ಟಿಸುತ್ತಾನೆ. ಕೃತಜ್ಞತೆ ತುಂಬಿದ ಹೆಣ್ಣು, ಮನೆಯ ಯಜಮಾನನಿಗೆ ಇಂದು ನಾನು ನಿಮ್ಮ ವಸ್ತು ನನ್ನ ಗಂಡ ತೀರಿಹೋಗಿದ್ದಾರೆ ಎನ್ನುತ್ತಾಳೆ. ಅವಳ ಆಕರ್ಷಣೆಯನ್ನು ಅನುಭವಿಸಿದ ಆತನೂ ಸಂಯಮ ತಂದುಕೊಳ್ಳುತ್ತಾನೆ. ಮನೆಗೆ ಬಂದ ತರುಣಿ ಅವನ ಮಗಳಂತೆ ಸುರಕ್ಷಿತವಾಗಿ ಅಲ್ಲಿಂದ ನಡೆಯುತಾಳೆ. ಹೀಗೆ ಅವರ ಅನೇಕ ಕಥೆಗಳಲ್ಲಿ ಜೀವನವನ್ನು ಯಥಾವತ್ತಾಗಿ ನೈಜ ರೀತಿಯಲ್ಲಿ ಚಿತ್ರಿಸುತ್ತಾರೆ. ಎಂ.ವಿ.ಸೀ. ಯವರ ಉತ್ತಮ ಕಥೆಗಳಲ್ಲಿ ಇದು ಒಂದು. ಈ ಕಥೆಯಲ್ಲಿ ಮುದುಕ ತರುಣಿಯ ಸಂಪತ್ತಿನ ಪ್ರಲೋಭವನ್ನು ಗೆಲ್ಲುತ್ತಾನೆ. ಮನೆಯೊಡೆಯ ಅವಳ ಲಾವಣ್ಯದ ಆಕರ್ಷಣೆಯನ್ನು ಗೆಲ್ಲುತ್ತಾನೆ. ಇದರೊಡನೆ ಹಿಂದೂ-ಮುಸ್ಲಿಂ ಕ್ರೂರ ಅಗ್ನಿಯ ನಡುವೆ ಈ ಹಿಂದೂ-ಮುಸ್ಲಿಂರ ಮಾನವತ್ವ ಬೆಳಗುತ್ತದೆ.

ನವೋದಯ ಬಹುಮಂದಿ ಕಥೆಗಾರರು ಜೀವನದ ಕಷ್ಟ ನೋವುಗಳ ಪರಿಹಾರವನ್ನು ಸಜ್ಜನರ ಒಳ್ಳೆಯತನದಲ್ಲಿ ದುಷ್ಟರ ಹೃದಯ ಪರಿವರ್ತನೆಯಲ್ಲಿ ಕಂಡರು. ಇವರು ಶೋಷಣೆ, ಕ್ರೌರ್ಯ ಇವುಗಳಿಗೆ ಕುರುಡರೇನೂ ಅಲ್ಲ. ಆದರೆ ಸಮಾಜ ಎನ್ನುವುದು ವ್ಯಕ್ತಿಗಳ ಸಮುದಾಯವಾದ್ದರಿಂದ ಇವರು ಸಾಮಾಜಿಕ ಸಮಸ್ಯೆಗಳಿಗೂ ಪರಿಹಾರವನ್ನು ವ್ಯಕ್ತಿಗಳ ಸ್ವಭಾವದ ಸುಧಾರಣೆಯಲ್ಲಿ ಕಂಡರು. ಸಾಮಾಜಿಕ ವ್ಯವಸ್ಥೆ ಅದರ ನಿಯಮಗಳತ್ತ ಇವರು ಹೆಬ್ಬಾಗಿ ಗಮನಹರಿಸಲಿಲ್ಲ.

ಎಂ.ವಿ.ಸೀ ಅವರ ಹಲವು ಕಥೆಗಳು ಪಾತ್ರಗಳು ಕಷ್ಟದಲ್ಲಿ ಮುಗಿಯುತ್ತವೆ. ಪರಿಹಾರ ದೊರೆತಾಗ ಬಹುಮಟ್ಟಿಗೆ ಅದು ಇತರ ಪಾತ್ರಗಳ ಒಳ್ಳೆಯತನದಿಂದಲೇ 'ನಿಲ್ದಾಣಗಳ ನಡುವೆ' ಯಂತಹ ಕಥೆಗಳಲ್ಲಿ ಆಕಸ್ಮಿಕ ಬಳಕೆ ಇದೆ. ಇದನ್ನು ಕಥೆಗಾರರು ಸಹಜವೆನ್ನುವಂತೆ ಮಾಡಲು ಎಷ್ಟೇ ಪ್ರಯತ್ನಿಸಿದರೂ ಕಥೆಯ ಗತಿ ತೀರ ಕೃತಕ. ಕಥೆಗಾರರು ತಿರುಚುತ್ತಿದ್ದಾರೆ ಎನ್ನಿಸುತ್ತದೆ. ಅಳುವಿನಲ್ಲಿ ಹೆಣ್ಣೊಬ್ಬಳು ಬಲಾತ್ಕಾರಕ್ಕೆ ಒಳಗಾಗಿ ಶೀಲವನ್ನು ಕಳೆದುಕೊಂಡಿದ್ದಾಳೆ ಅನಂತರ ಮದುವೆಯಾಗಿದೆ. ಆದರೆ ತನ್ನದು ಎಂಜಲು ಮೈ ಎನ್ನುವ ಭಾವ ಗಂಡನಿಗೆ ಮೋಸಮಾಡುತ್ತಿದ್ದೇನೆ ಎಂಬ ಸಂಕಟ ಅವಳ ಪಾಲಿಗೆ ಹಗಲು ರಾತ್ರಿ ಎಲ್ಲಾ ಅಳುವಿಗಾಗಿಯೇ ಇರುವುದು. ಅಳು ಅಳು ಅಳು! ಎಂದೇ ಕಥೆ ಪ್ರಾರಂಭವಾಗುತ್ತದೆ. ಕೊನೆಗೆ ಕಾಗದ ಬರೆದಿಟ್ಟು ಗಂಡನಿಗೆ ನಿಜಾಂಶ ತಿಳಿಸುತ್ತಾಳೆ. ಗಂಡ 'ನೀನಿರುವಂತೆಯೇ ಸ್ವೀಕರಿಸಲು ಸಿದ್ಧ' ಎಂದು ಹೇಳುತ್ತಾನೆ. ಒಂದು ವರ್ಷವಾದ ಮೇಲೆ ರಮೇಶನಿಗೆ ಅಳು ಕೇಳಿ ಬಂದಿತು. ರೋಹಿಣಿಯದಲ್ಲ, ಅವಳ ಹೆತ್ತ ತನ್ನ ಮಗುವಿನದ್ದು. ಇಲ್ಲಿ ಗಂಡ ಹೆಂಡತಿಯನ್ನು ಒಪ್ಪಿಕೊಳ್ಳುವುದು ಒಂದು ಗಮನಾರ್ಹವಾದ ಸಂಗತಿಯಾಗಿದೆ.

'ಮುರಿದ ಅಗಣಿ' ಕತೆಯಲ್ಲಿ ಪಾಕಿಸ್ತಾನದ ಹುಟ್ಟಿನ ಸ್ವಲ್ಪ ಮೊದಲು ಭಾರತದಲ್ಲಿ ನಡೆದ ನೆತ್ತರು ಸ್ನಾನದ ಸಂದರ್ಭದಲ್ಲಿ ನಡೆದ ಪ್ರಸಂಗವನ್ನು ನಿರೂಪಿಸುತ್ತದೆ ಅಥವಾ ಎರಡು ಪ್ರಸಂಗಗಳನ್ನು ನಿರೂಪಿಸುತ್ತದೆ. ಒಂದು ಮತ್ತೊಂದರ ಶಿಶು. ಬಡ ಜಟಕಾ ಸಾಹೇಬನ ಹತ್ತಿ ಉರಿಯುತ್ತಿರುವ ದ್ವೇಷಾಗ್ನಿಯ ಮಧ್ಯೆ ತನ್ನ ಯಜಮಾನನ ಮಗಳನ್ನು ಸಂರಕ್ಷಿಸಿ ತನ್ನ ಪರಿಚಯದ ಒಬ್ಬರ ಮನೆಗೆ ರಾತ್ರಿ ಮುಟ್ಟಿಸುತ್ತಾನೆ. ಕೃತಜ್ಞತೆ ತುಂಬಿದ ಹೆಣ್ಣು, ಮನೆಯ ಯಜಮಾನನಿಗೆ ಇಂದು ನಾನು ನಿಮ್ಮ ವಸ್ತು ನನ್ನ ಗಂಡ ತೀರಿಹೋಗಿದ್ದಾರೆ ಎನ್ನುತ್ತಾಳೆ. ಅವಳ ಆಕರ್ಷಣೆಯನ್ನು ಅನುಭವಿಸಿದ ಆತನೂ ಸಂಯಮ ತಂದುಕೊಳ್ಳುತ್ತಾನೆ. ಮನೆಗೆ ಬಂದ ತರುಣಿ ಅವನ ಮಗಳಂತೆ ಸುರಕ್ಷಿತವಾಗಿ ಅಲ್ಲಿಂದ ನಡೆಯುತಾಳೆ. ಹೀಗೆ ಅವರ ಅನೇಕ ಕಥೆಗಳಲ್ಲಿ ಜೀವನವನ್ನು ಯಥಾವತ್ತಾಗಿ ನೈಜ ರೀತಿಯಲ್ಲಿ ಚಿತ್ರಿಸುತ್ತಾರೆ. ಎಂ.ವಿ.ಸೀ. ಯವರ ಉತ್ತಮ ಕಥೆಗಳಲ್ಲಿ ಇದು ಒಂದು. ಈ ಕಥೆಯಲ್ಲಿ ಮುದುಕ ತರುಣಿಯ ಸಂಪತ್ತಿನ ಪ್ರಲೋಭವನ್ನು ಗೆಲ್ಲುತ್ತಾನೆ. ಮನೆಯೊಡೆಯ ಅವಳ ಲಾವಣ್ಯದ ಆಕರ್ಷಣೆಯನ್ನು ಗೆಲ್ಲುತ್ತಾನೆ. ಇದರೊಡನೆ ಹಿಂದೂ-ಮುಸ್ಲಿಂ ಕ್ರೂರ ಅಗ್ನಿಯ ನಡುವೆ ಈ ಹಿಂದೂ-ಮುಸ್ಲಿಂರ ಮಾನವತ್ವ ಬೆಳಗುತ್ತದೆ.

ನವೋದಯ ಬಹುಮಂದಿ ಕಥೆಗಾರರು ಜೀವನದ ಕಷ್ಟ ನೋವುಗಳ ಪರಿಹಾರವನ್ನು ಸಜ್ಜನರ ಒಳ್ಳೆಯತನದಲ್ಲಿ ದುಷ್ಟರ ಹೃದಯ ಪರಿವರ್ತನೆಯಲ್ಲಿ ಕಂಡರು. ಇವರು ಶೋಷಣೆ, ಕ್ರೌರ್ಯ ಇವುಗಳಿಗೆ ಕುರುಡರೇನೂ ಅಲ್ಲ. ಆದರೆ ಸಮಾಜ ಎನ್ನುವುದು ವ್ಯಕ್ತಿಗಳ ಸಮುದಾಯವಾದ್ದರಿಂದ ಇವರು ಸಾಮಾಜಿಕ ಸಮಸ್ಯೆಗಳಿಗೂ ಪರಿಹಾರವನ್ನು ವ್ಯಕ್ತಿಗಳ ಸ್ವಭಾವದ ಸುಧಾರಣೆಯಲ್ಲಿ ಕಂಡರು. ಸಾಮಾಜಿಕ ವ್ಯವಸ್ಥೆ ಅದರ ನಿಯಮಗಳತ್ತ ಇವರು ಹೆಬ್ಬಾಗಿ ಗಮನಹರಿಸಲಿಲ್ಲ.

ಎಂ.ವಿ.ಸೀ. ಯವರು ವ್ಯಕ್ತಿಯ ಅನುಕಂಪ, ಔದಾರ್ಯ ಇವುಗಳನ್ನೆ ಪ್ರಧಾನವಾಗಿ ಪರಿಗಣಿಸಿದರು. ಇದರಿಂದ ಅವರ ಕಥೆಗಳಲ್ಲಿ ಒಂದು ಬಗೆಯ ಸರಳತೆ ಅನಿವಾರ್ಯವಾಯಿತು. ಸರಳತೆಯೇ ಕಥೆಯ ಸಾಧನೆಗೆ ಚೀಲಿ ಕಟ್ಟಿಸಬೇಕಾಗಿಲ್ಲ. ಸರಳವಾದ ಕಥೆಯೂ ಒಳ್ಳೆಯ ಕಥೆಯಾಗಬಹುದು ಎಂಬುದನ್ನು ಮಾಸ್ತಿಯವರ ಕಥೆಗಳು ತೋರಿಸಿಕೊಟ್ಟಿವೆ. ಎಂ.ವಿ.ಸೀ ರವರ ಕಥೆಗಳಲ್ಲಿ ಆಗಾಗ ಕಿರಿಕಿರಿ ಮಾಡುವುದು ಓದುಗರ ಆಸಕ್ತಿಯನ್ನು ಸೆಳೆದು ಉಳಿಸಿಕೊಳ್ಳಲು ಮಾಡುವ ಮಿತಿಮೀರಿದ ಪ್ರಯತ್ನ. (ಹಾದಿಯ ಚಲುವೆ, ಊಹೆ ಬಜವಾದರೆ? ಆ ಚೋಟುದ್ದ ಹುಡುಗ, ಕೊಳ್ಳಿದೆವ್ವ ಇಂತಹ ಕಥೆಗಳಲ್ಲಿ ಇದು ಓದುವವರ ತಾಳ್ಮೆಯನ್ನು ಪರೀಕ್ಷಿಸುವ ಮಟ್ಟಿಗೆ ಹೋಗುತ್ತದೆ.) ಎರಡನೆಯ ಮಿತಿ ಎಂದರೆ ಅತಿಭಾವುಕತೆ ಮರುಕದ ಸೃಷ್ಟಿಯೇ ಕತೆಯ ಮುಖ್ಯ ಆಶಯವಾಗಿಬಿಡುತ್ತದೆ. 'ಅಮರ ಕಲೆ' ತಾಯೊಬ್ಬಳೆ ನನಗೆ ಗೊತ್ತಿರುವುದು, ಪುಷ್ಪ ರಗಳೆ, ತಂತಿ ಕಿತ್ತ ಪಿಟಿಲು ಇಚಿತಹ ಕಥೆಗಳಲ್ಲಿ ಇದನ್ನು ಕಾಣಬಹದು. ಒಮ್ಮೊಮ್ಮೆ ಜಟಿಲವಾದ ಸಮಸ್ಯೆಗೂ ಅತಿ ಭಾವುಕತೆಯೇ ಪರಿಹಾರವನ್ನು ನಿರ್ಧರಿಸಿ ಬಿಡುತ್ತದೆ. ಪರಿಹಾರದಲ್ಲಿ ಇದನ್ನು ಕಾಣಬಹುದು. ಅಕ್ಕನ ಮಗು ತಬ್ಬಲಿಯಾಗಬಾರದೆಂಬ ಅನುಕಂಪದಿಂದ ತರುಣಿ ಭಾವನ ಕೈಹಿಡಿಯುತ್ತಾಳೆ. ಆದರೆ ಈ ಮದುವೆಯಿಂದ ವೈಮನಸ್ಯಗಳಿಗೆ ಹಿಂಸೆಯಾದಾಗ ತನ್ನ ನೆಚ್ಚಿನ ಕಥೆಗಾರನಿಗೆ ಪತ್ರ ಬರೆಯುತ್ತಾಳೆ. (ಅವನು ತಾನು ಹೋಗದೆ ತನ್ನ ಸ್ನೇಹಿತನನ್ನು ಕಳುಹಿಸುವುದು ಅವನೇ ಕಥೆಗಾರ ಎಂದು ಭಾವಿಸಿ ಅವಳು "ನಿಮ್ಮ ಕವಿವಾಣಿಯಲ್ಲಿ ನನಗೆ ಸಂಪೂರ್ಣವಾಗಿ ಭರವಸೆಯುಂಟು. ಸಮಾಜಕ್ಕೆ ಗುರುವಾಗಬಲ್ಲ ನೀವು ನನಗೂ ಗುರುವಾಗಬೇಕೆಂದು ಬೇಡುವುದು ಆನಂತರ ಕಥೆಗಾರನೇ ಹೋಗುವುದು ಅನಗತ್ಯ ಗೊಂದಲ) ಅವನೇ ಅವಳ ಕೈಹಿಡಿಯಲು ಒಪ್ಪುತ್ತಾನೆ. ಹೀಗೆ ಸಮಸ್ಯೆ ಸುಲಭವಾಗಿ ಪರಿಹಾರವಾಗುತ್ತದೆ.

ಎಂ.ವಿ.ಸೀ ಯವರ ಹಲವು ಕಥೆಗಳಲ್ಲಿ ನೈತಿಕತೆಯನ್ನು ಸರಾಗವಾಗಿ ಒಪ್ಪಿಕೊಳ್ಳುವಂತಹದ್ದು ಕಂಡುಬರುತ್ತದೆ. ಇಲ್ಲಿ ಅವರ ಜೀವನ ಶ್ರದ್ಧೆ, ನಂಬಿಕೆ, ಉದಾತ್ತ ಮನೋಭಾವನೆಗಳು ಕಂಡುಬರುತ್ತವೆ. 'ಅಳು ಅಳು' ಕಥೆಯಲ್ಲಾಗಲೀ, 'ಸ್ನೇಹದ ಕಾಣಿಕೆ'ಯಲ್ಲಾಗಲೀ ಇಂತಹ ನೈತಿಕ ಪ್ರಜ್ಞೆಯನ್ನು ತಿಳಿಸುವಂತಹದ್ದಾ ಗಿದೆ. ಅಳು–ಅಳು ಕಥೆಯಲ್ಲಿ ತನ್ನ ಹೆಂಡತಿಗೆ ನಾನು ಮದುವೆಗೂ ಮುಂಚೆ ಬೇರೆಯವರೊಂದಿಗೆ ಅನೈತಿಕ ಸಂಬಂಧ ಇಟ್ಟುಕೊಂಡು ಶೀಲ ಕೆಡಿಸಿಕೊಂಡಿದ್ದೇನೆ. ನಾನು ಗಂಡನಿಗೆ ಮೋಸಮಾಡುತ್ತಿದ್ದೇನೆ ಎಂದು ಹೆಂಡತಿಯ ಭಾವನೆಯಾಗಿದೆ. ಆದರೆ ಗಂಡ ರಮೇಶನಗೆ ನೇರವಾಗಿ ಹೇಳದೆ ಒಂದು ಪತ್ರದ ಮೂಲಕ ಗಂಡನಿಗೆ ತಿಳಿಸಿದಾಗ ಗಂಡನಾದ ರಮೇಶ ನೀನಿರುವಂತೆಯೇ ನಾನು ಸ್ವೀಕರಿಸಲು ಸಿದ್ಧ ಎಂದು ಒಪ್ಪಿಕೊಳ್ಳುತ್ತಾನೆ. ಈ ಕತೆಯಲ್ಲಿ ರಮೇಶನ ಶ್ರದ್ಧೆ, ನಂಬಿಕೆ ಅವನ ಮನೋಭಾವನೆಯನ್ನು ಮೆಚ್ಚುವಂತದ್ದು ಲೇಖಕರು ಸಹ ಇದರ ಪರಿಹಾರವನ್ನು ಮೌನವಾಗಿ ಒಪ್ಪಿಕೊಳ್ಳುತ್ತಾರೆ.

ಸ್ನೇಹದ ಕಾಣಿಕೆಯಲ್ಲೂ ಸಹ ಇಂತಹ ಪರಿಸ್ಥಿತಿ ಕಂಡುಬರುತ್ತದೆ. ಮೇಲಿನ ಎರಡೂ ಕಥೆಗಳು ಒಂದೇ ದೃಷ್ಟಿಕೋನವನ್ನು ಒಳಗೊಳ್ಳುತ್ತವೆ. ಇಲ್ಲಿ ವೆಂಕಟೇಶಯ್ಯ ಮತ್ತು ಸುಶೀಲಮ್ಮ

ನವರ ಸಂಸಾರ ಒಂದು ಚಿಕ್ಕದಾದ ಸಂಸಾರ. ಆದರೆ ಈ ಕಥೆಯಲ್ಲಿ ಆಶ್ರಯ ಪಡೆಯಲು ಸುಬ್ಬರಾಯನ ಪ್ರವೇಶವಾಗುತ್ತದೆ. ಮೊದಮೊದಲು ಸುಬ್ಬರಾಯನ ಬಗ್ಗೆ ಸುಶೀಲಮ್ಮ ಅಸಹ್ಯಪಟ್ಟುಕೊಳ್ಳುತ್ತಿದ್ದಳು. ಆನಂತರ ಅವನ ಮೇಲೆ ಮನೆಯವರೆಲ್ಲರಿಗೂ ಪ್ರೀತಿ, ವಿಶ್ವಾಸ ನಂಬಿಕೆ ಗಳಿಸುತ್ತಾನೆ. ಸುಬ್ಬರಾಯ ಆ ಮನೆಯ ಸದಸ್ಯರಲ್ಲಿ ಒಬ್ಬನೆನ್ನುವಷ್ಟು ಮಟ್ಟಿಗೆ ಹೊಂದಿಕೊಳ್ಳುತ್ತಾನೆ. ಅಲ್ಲದೇ ವೆಂಕಟೇಶಯ್ಯನ ಎಲ್ಲಾ ಜವಾಬ್ದಾರಿಗಳನ್ನು ಅವನು ವಹಿಸಿಕೊಳ್ಳುತ್ತಾನೆ. ಕೊನೆಗೆ ಸುಬ್ಬರಾಯನನ್ನು ಮನೆಯಿಂದ ಹೊರಗೆ ಕಳಿಸುವದು ಕಷ್ಟ ಅಥವಾ ಅವನೇ ಮನೆಯಿಂದ ಹೊರಗೆ ಹೋಗುತ್ತೇನೆ ಎಂದರೆ ಒಪ್ಪಿಕೊಳ್ಳಲಾಗದ ಸ್ಥಿತಿ ವೆಂಕಟೇಶಯ್ಯನನ್ನು ಕಾಡುತ್ತದೆ. ಕೊನೆಗೆ ತನ್ನ ಗಂಡನಿಂದ ಪಡೆಯಲಾಗದ ಗರ್ಭವನ್ನು ಅವನ ಸ್ನೇಹಿತನಿಂದ ಪಡೆಯುತ್ತಾಳೆ. ಆದರೆ ಅವಳಿಗೆ ಮನಸ್ಸಿನಲ್ಲಿ ನಾನು ಗಂಡನಿಗೆ ಮೋಸ ಮಾಡಿದ್ದೇನೆ ಎಂಬ ಭಾವನೆ ಅವಳನ್ನು ಕಾಡುತ್ತದೆ. ಅವಳು ಮನೆಯನ್ನು ಬಿಟ್ಟು ಹೋಗುವಂತದ್ದು ಹಾಗೂ ತನ್ನ ಮಗುವನ್ನು ಹಡೆದು ಸಾಯುವಂತದ್ದು ಕೊನೆಗೆ ಪರಿಣಾಮಕಾರಿಯಾಗಿ ಮಗು ವೆಂಕಟೇಶಯ್ಯನ ಕೈಗೆ ಸೇರುತ್ತದೆ. ತನ್ನದಲ್ಲದ ಮಗುವನ್ನು ಅವನು ಇದು 'ಸ್ನೇಹದ ಕಾಣಿಕೆ' ಎಂದು ಒಪ್ಪಿಕೊಳ್ಳುತ್ತಾನೆ. ಅವನಲ್ಲಿ ಮಾನವೀಯ ದೃಷ್ಟಿ ಕಂಡುಬರುತ್ತದೆ. ಆದರೆ 'ಅಳು' ಕಥೆಯಲ್ಲಿ ಗಂಡ ಹೆಂಡತಿ ಮಾಡಿರುವ ತಪ್ಪನ್ನು ಸಹಜವಾಗಿ ಒಪ್ಪಿಕೊಂಡು ಅವಳ ಜೊತೆ ಸಂಸಾರ ಮಾಡುವಂತದ್ದು ತುಂಬಾ ಅರ್ಥವತ್ತಾಗಿ ಕಾಣುತ್ತದೆ. ಈ ಕಥೆ ಸುಖಾಂತದಲ್ಲಿ ಕೊನೆಗೊಳ್ಳುತ್ತದೆ. ಆದರೆ ಸ್ನೇಹದ ಕಾಣಿಕೆಯಲ್ಲಿ ಬರುವಂತ ಹೆಣ್ಣು ನಾನು ನಿಮಗೆ ಅನ್ಯಾಯ ಮಾಡಿದ್ದೇನೆ, ನಾನು ಪಾಪಿ, ನಿಮ್ಮ ಜೊತೆಯಲ್ಲಿ ಇರುವುದು ಸರಿಯಿಲ್ಲ ಎಂದು ತಿಳಿದು ಕೊನೆಗೆ ಸಾಯುತ್ತಾಳೆ. ಈ ಕಥೆ ದುಃಖದಲ್ಲಿ ಕೊನೆಗೊಳ್ಳುತ್ತದೆ.

ರತಿದೇವಿ ಕಥೆಯು ಸಹ ಒಂದು ಚಿತ್ರ ಬರೆಯುವ ಕಲಾವಿದನಿಗೆ ಸಂಬಂಧಿಸಿದ ಕಥೆಯಾಗಿದೆ. ಇಲ್ಲಿ ಶ್ರೀಕಾಂತ ಕಥಾನಾಯಕನಾಗಿ ಕಂಡುಬರುತ್ತಾನೆ. ಅವನಿಗೆ ನಾನು ಜೀವನದಲ್ಲಿ ಸಾಧನೆ ಮಾಡಬೇಕು ಅದೇನೆಂದರೆ, ಒಂದು ಸಾರಿ ಅತ್ಯಂತ ಸುಂದರವಾದ 'ರತಿ'ಯ ಚಿತ್ರ ಬಿಡಿಸಬೇಕು ಅದು ಶ್ರೀಕಾಂತನ ಜೀವನದ ಗುರಿಯಾಗಿತ್ತು. ಆದರೆ ಶ್ರೀಕಾಂತನಿಗೆ ಅತ್ಯಂತ ಸುಂದರವಾದ ಸ್ತ್ರೀ ಅಂದರೆ ರತಿಯ ಚಿತ್ರ ಬರೆಯಲು ಸುಂದರವಾದ ಹೆಣ್ಣನ್ನು ಎಲ್ಲಿಂದ ಕರೆದುಕೊಂಡು ಬರುವುದು ಎಂಬುದು ಅವನಗೆ ಚಿಂತೆಯಾಗುತ್ತದೆ. ಅವನ ಮನಸ್ಸಿನಲ್ಲಿ ಈ ರೀತಿ ಆಲೋಚಿಸುತ್ತಾನೆ. "ನಾನು ರತಿಯ ಚಿತ್ರ ಬರೆಯಬೇಕೊ, ನಿಮ್ಮ ಹೆಂಡತಿ ಇಲ್ಲವೆ ನಿಮ್ಮ ಮಗಳನ್ನು, ಇಲ್ಲವೆ ನಿಮ್ಮ ಸೋದರಿಯನ್ನು ಒಂದು ತಿಂಗಳ ಮಟ್ಟಿಗೆ, ಬೇಡ ಒಂದು ವಾರ, ಕಟ್ಟಕಡೆಗೆ ಒಂದು ದಿನ ಕಳುಹಿಸಿಕೊಡಿ, ಬೇರೆ ಎಣಿಸಬೇಡಿ, ನೀವು ಜೊತೆಯಲ್ಲಿ ಬನ್ನಿ"೩ ಎಂದು ಯಾರನ್ನು ಬೇಡುವದು ಎಂದು ಶ್ರೀಕಾಂತನಲ್ಲಿ ನಾನಾ ರೀತಿಯ ಆಲೋಚನೆಗಳು ಹೊಳೆಯುತ್ತವೆ. ಅಲ್ಲದೆ ರತಿಯನ್ನು ಹುಡುಕುವುದಕ್ಕಾಗಿ ಅವನು ಸಾಕಷ್ಟು ಹಣ ಖರ್ಚು ಮಾಡಿ ಬೇರೆ ಬೇರೆ ಊರುಗಳನ್ನು ಸುತ್ತಿಬಂದಿರುವುದು ತಿಳಿಯುತ್ತದೆ. ಕೊನೆಗೆ ಒಬ್ಬ ಭಿಕ್ಷೆ ಬೇಡುವ ಲಕ್ಷ್ಮೀಯನ್ನು ಕರೆದುಕೊಂಡು

ಬಂದು ಅವಳನ್ನು ನಾಗರೀಕಳನ್ನಾಗಿ ಮಾಡಿ ಅವಳಿಗೆ ವಿದ್ಯಾಭ್ಯಾಸ ಕಲಿಸಿ ಅವಳನ್ನು ಉತ್ತಮ ವ್ಯಕ್ತಿಯನ್ನಾಗಿ ಮಾಡುತ್ತಾನೆ. ಈ ಲಕ್ಷ್ಮೀಯಲ್ಲಿ ರತಿಯನ್ನು ಕಾಣುತ್ತಾನೆ. ಹೀಗೆ ರತಿಯ ಚಿತ್ರ ಬರೆಯುವುದು ನನ್ನ ಗುರಿ ಎಂದು ಲಕ್ಷ್ಮೀಯ ಮನಸ್ಸು ಒಲಿಸಿ ಅವಳನ್ನು ರತಿಯ ಬಿಡಿಸಲು ಮಾದರಿಯನ್ನಾಗಿ ತೆಗೆದುಕೊಳ್ಳುತ್ತಾನೆ.

ಶ್ರೀಕಾಂತ ಮತ್ತು ಲಕ್ಷ್ಮೀಯ ನಡುವೆ ಪ್ರೀತಿ–ವಿಶ್ವಾಸ ಇದ್ದದ್ದು ಕೊನೆಯಲ್ಲಿ ಪ್ರೇಮಾಂಕುರವಾಗುತ್ತದೆ. ಆದರೆ ಇಲ್ಲಿ ಶ್ರೀಕಾಂತನಿಗೆ ಅವನ ಗುರಿ ಅಡ್ಡಬಂದು ಅವನು ಲಕ್ಷ್ಮೀಯನ್ನು ನಾನಾರೀತಿಯ ಭಂಗಿಗಳಲ್ಲಿ ನಿಲ್ಲಿಸಿ ರತಿಯ ಚಿತ್ರ ಬರೆಯುತ್ತಾನೆ. ಕೊನೆಗೆ ಲಕ್ಷ್ಮೀ ಕೆಲವು ದಿನಗಳ ಕಾಲ ಆಹಾರ, ನೀರು ಇಲ್ಲದೆ ಶ್ರೀಕಾಂತ ಚಿತ್ರ ಬರೆಯಲು ಮಾದರಿಯಾಗಿ ನಿಲ್ಲುತ್ತಾಳೆ. ಶ್ರೀಕಾಂತ ಕೊನೆಗೆ ಗುರಿಯನ್ನು ಸಾಧಿಸುತ್ತಾನೆ. ಆದರೆ ಲಕ್ಷ್ಮೀ ಅವನಿಂದ ದೂರವಾಗುತ್ತಾಳೆ. ಈ ಸ್ವರೂಪದಲ್ಲಿ ಕಥೆ ನಿರೂಪಿತವಾಗಿದೆ.

ಎಂ.ವಿ.ಸೀ ರವರ ಕಥೆಗಳಲ್ಲಿ ಮನುಷ್ಯ–ಮನುಷ್ಯನಲ್ಲಿ ಅನುಕಂಪ, ಕರುಣೆ, ಪ್ರೀತಿ, ಸೌಹಾರ್ಧ ಸ್ವಭಾವಗಳಿರುತ್ತವೆ. ಆದರೆ ಅವನ್ನು ಒಬ್ಬ ಮನುಷ್ಯ ಇನ್ನೊಬ್ಬನಲ್ಲಿ ಅನುಕಂಪ ಬರುವಂತೆ ಚಿತ್ರಿಸಲಾಗಿದೆ. ಉದಾ:– ಪೆಪ್ಪರಮೆಂಟು ಕತೆ.

ಅವರ ಕತೆಗಳಲ್ಲಿ ಕಾಣುವ ಪ್ರಧಾನ ಕಾಳಜಿ ಎಂದರೆ ಪಾಪ, ಪುಣ್ಯ ಹಾಗೂ ನೈತಿಕ ಪ್ರಜ್ಞೆ ಅವರ ಕಥೆಗಳಲ್ಲಿ ಪ್ರಧಾನವಾಗಿ ಕಾಣುತ್ತವೆ. ಉದಾ:– ಮೇದರ ಚನ್ನಿ, ಸ್ನೇಹದ ಕಾಣಿಕೆ ಅಂತಹ ಕಥೆಗಳಾಗಿವೆ.

ಸಮಾಜದಲ್ಲಿ ಕಟ್ಟುಕಟ್ಟಲೆಗಳಿರಬೇಕು ಅವು ಮನುಷ್ಯನಿಗೆ ಎಷ್ಟು ಬೇಕೋ ಅಷ್ಟಿರಬೇಕು. ಅವು ಮನುಷ್ಯನ ಜೀವ ವಿರೋಧಿಯಾಗಬಾರದು. ಬಾಲ್ಯವಿವಾಹ ಮಾಡುವದು ಅಂದಿನ ಕಾಲದಲ್ಲಿ ಪ್ರಚಲಿತದಲ್ಲಿದ್ದ ಪದ್ಧತಿಯಾಗಿತ್ತು. ಈ ರೀತಿ ಬಾಲ್ಯವಿವಾಹವಾಗಿ ಕಾಲಾಂತರದಲ್ಲಿ ಗಂಡ ತೀರಿಕೊಂಡರೆ ಆ ಹೆಣ್ಣು ಜೀವನ ಪರ್ಯಂತ ಮುಂಡೆಯಾಗಿ ಜೀವನ ನಡೆಸಬೇಕು ಎಂಬ ಪದ್ಧತಿ ಅಂದಿನ ಸಮಾಜದಲ್ಲಿತ್ತು. ಆದರೆ ಅಂದು ವಿಧವೆಯಾದ ಹೆಣ್ಣು ನೋಡುಗರಿಗೆ ಅಂದವಾಗಿ ಕಾಣಬಾರದು ಎಂದು ಅವಳಿಗೆ ತಲೆ ಬೋಳಿಸಿ ಹರಿಕಥೆ, ಭಜನೆಗಳಲ್ಲಿ ತೊಡಗುವಂತಹ ಪದ್ಧತಿ ಅಂದಿನ ಸಮಾಜದಲ್ಲಿ ಬೇರೂರಿತ್ತು. ಇಂತಹ ಪದ್ಧತಿಗಳು ನಮ್ಮ ಜೀವ ವಿರೋಧಿ ಆದ್ದರಿಂದ ಕಟ್ಟುಕಟ್ಟಲೆಗಳನ್ನು ಹೊಡೆಯಬೇಕು ಎಂಬುದನ್ನು ಎಂ.ವಿ.ಸೀ ಯವರು 'ಸುಂದರ ಪರಿವರ್ತನೆ' ಎಂಬ ಸಣ್ಣಕತೆಯಲ್ಲಿ ತುಂಬಾ ಸೊಗಸಾಗಿ ಚಿತ್ರಿಸಿದ್ದಾರೆ. ಅವರ ಮುಖ್ಯ ಉದ್ದೇಶ ಸಮಾಜಕ್ಕೆ ಒಂದು ಹೊಸ ಸಂದೇಶವನ್ನು ಕೊಡುವುದು ಅದರ ಮೂಲಕ ಜನರಿಗೆ ಮನವರಿಕೆ ಮಾಡಿಕೊಡುವುದು.

ಸುಂದರ ಪರಿವರ್ತನೆ ಕಥೆಯಲ್ಲಿ ಲಕ್ಷ್ಮಮ್ಮ ಸಮಾಜವನ್ನು ಎದುರಿಸಿ ತನ್ನ ಬಾಳಿಗೆ ಒಂದು ಹೊಸ ಮಾರ್ಗವನ್ನು ಕಂಡುಕೊಂಡಳು. ನಾನು ಸಹ ಇತರರಂತೆ ಬದುಕಬೇಕು ಎಂದು ಅಣ್ಣನ ಮನೆಯಿಂದ ಹೊರಬಂದು ಎರಡನೇ ಮದುವೆಯಾಗಿ ಗಂಡನಿಗೆ ನಿಷ್ಠಳಾಗಿ

ಬದುಕಿ, ಅವನಿಂದ ಒಂದು ಮಗುವನ್ನು ಪಡೆದು ಆ ಮಗು ದೊಡ್ಡದಾಗಿ ಅದರ ಜವಾಬ್ದಾರಿಯನ್ನ ಮುಗಿಸಿ ಅವಳು ನಾನು ಯಾವ ತಪ್ಪು ಮಾಡಿಲ್ಲವೆಂದು ಮೈಸೂರಿಗೆ ಬಂದು ನೆಲಸುವಂತದ್ದು, ಇದು ಅವಳ ಬಾಳಿಗೆ ಕಂಡುಕೊಂಡ ಒಂದು ಸುಂದರ ಪರಿವರ್ತನೆಯಾಗಿದೆ. ಇದು ಸ್ವರೂಪದ ದೃಷ್ಟಿಯಿಂದ ಅತ್ಯತ್ತಮ ಕಥೆಯಾಗಿದೆ.

ಅವರ ಕಥೆಗಳಲ್ಲಿ ಪ್ರಧಾನವಾಗಿ ಗುರುತಿಸುವದು ಪ್ರಮಾಣಿಕತೆಯ ಬಗ್ಗೆ ಒಂದು ಒಳ್ಳೆಯ ಭಾವನೆ ಕಂಡುಬರುತ್ತದೆ. ಎಂ.ವಿ.ಸೀ ರವರು ಸಮಾಜದ ಜನರಿಲ್ಲಿರುವಂತಹ ಮೂಢನಂಬಿಕೆ, ಕಂದಾಚಾರಗಳನ್ನು ಕೆಲವು ಕತೆಗಳ ಪಾತ್ರಗಳ ಮೂಲಕ ವಿರೋಧಿಸುವಂತದ್ದು ಕಂಡುಬರುತ್ತದೆ. ಆದರೆ ಅವರು ಸಂಪ್ರದಾಯಕ್ಕೆ ನಿಷ್ಠವಾಗಿ ನಡೆದುಕೊಂಡು ಬಂದ ನಂಬಿಕೆಗಳನ್ನು ತಿರಸ್ಕರಿಸುವುದಿಲ್ಲ ಅವನ್ನು ಮೌನವಾಗಿ ಒಪ್ಪಿಕೊಳ್ಳುತ್ತಾರೆ.

ಅವರ ಕಥೆಗಳಲ್ಲಿ ಪಾಪ–ಪುಣ್ಯಗಳು ನೈತಿಕ ಚೌಕಟ್ಟಿನಲ್ಲಿ ಮನುಷ್ಯ ಬದುಕಬೇಕು. ಅವನು ಇತರರೊಂದಿಗೆ ಸಹಾನುಭೂತಿ, ಅನುಕಂಪದಿಂದ ಇರಬೇಕು ಆದರೆ ಬೇರೊಬ್ಬರ ಬಗ್ಗೆ ಕೀಳಾಗಿ ಮಾತನಾಡುವುದು ಸಲ್ಲದು. ಅವರ ಕಥೆಗಳ ಮುಖ್ಯ ಕಾಳಜಿ ನಮ್ಮ ಹಿಂದೂ ಸಂಸ್ಕೃತಿ ಶ್ರೇಷ್ಠ ಅಂತಹ ಶ್ರೇಷ್ಠ ಸಂಸ್ಕೃತಿಯನ್ನು ಜನರಿಗೆ ಮನವರಿಕೆ ಮಾಡಿಕೊಡುವುದು ಹಾಗೂ ಅದನ್ನು ಒಪ್ಪುವಂತೆ ಮಾಡುವುದು.

ಮನುಷ್ಯನಲ್ಲಿ ಸಹಜವಾಗಿ ಕೀಳು, ಸಣ್ಣತನಗಳು ಇರುತ್ತವೆ. ಅವನಲ್ಲಿ ಇರುವ ಸಣ್ಣತನಗಳನ್ನು ತೋರಿಸಿ ಮನುಷ್ಯನ ಘನತೆಗೆ ದಕ್ಕೆ ತರುವಂತದ್ದು ಸಲ್ಲದು. ಉನ್ನತ ಜಾತಿಯವರಲ್ಲಿ ಅಂದಿನ ಪರಿಸ್ಥಿತಿಯಲ್ಲಿ ಜಾತಿ ಧರ್ಮದ ಪ್ರಭಾವ ಯತ್ತೇಚ್ಚವಾಗಿ ಬೇರೂರಿದ್ದವು ಅದು ಸಲ್ಲದು. ಎಲ್ಲರೂ ಸಮಾನರು, ಮನುಷ್ಯ–ಮನುಷ್ಯನಾಗಿ ಕಾಣವುದು ಅವರ ಪ್ರಧಾನ ಕಾಳಜಿ. ಮನುಷ್ಯನ ನಿಜವಾದ ವ್ಯಕ್ತಿತ್ವವನ್ನು ತೋರಿಸುವುದು ಅವರ ಮುಖ್ಯ ಉದ್ದೇಶವಾಗಿದೆ.

ಎಂ.ವಿ.ಸೀ. ರವರು ಮಾಸ್ತಿಯವರನ್ನು ಪ್ರಧಾನವಾಗಿ ಅವರು ಹಾಕಿಕೊಟ್ಟ ಒಂದು ಮಾರ್ಗವನ್ನು ಅನುಸರಿಸಿದರು. ಇವರು ಕೂಡ ಮಾಸ್ತಿಯವರಂತೆ ಸಂಪ್ರದಾಯಕ್ಕೆ ನಿಷ್ಠರಾಗಿ ಬರೆದರೂ ಮಾಸ್ತಿಯವರಿಗಿಂತ ಭಿನ್ನವಾಗಿ ಎಂ.ವಿ.ಸೀ ಯವರು ಗುರುತಿಸಿಕೊಳ್ಳುತ್ತಾರೆ. ಮಾಸ್ತಿಯವರಂತೆ ಇವರು ನಮ್ಮ ಸಂಸ್ಕೃತಿಯ ಚೌಕಟ್ಟಿನಲ್ಲೆ ಕಥೆಗಳನ್ನು ಚಿತ್ರಿಸಿದರೂ ಅಂದಿನ ಸಮಾಜದ ಜನರಲ್ಲಿ ಬೇರೂರಿದ್ದ ಇತರರೊಂದಿಗೆ ಸಹಾನುಭೂತಿ,ಅನುಕಂಪ, ಕರುಣೆಯನ್ನು ತೋರಿಸುವುದು ಈ ವಿಚಾರಗಳನ್ನು ಚೆನ್ನಾಗಿ ಅವರ ಕಥೆಗಳಲ್ಲಿ ಚಿತ್ರಿಸಿದ್ದಾರೆ. ಒಟ್ಟಾರೆಯಾಗಿ ಅವರ ಕಥೆಗಳು ಸ್ವರೂಪದ ದೃಷ್ಟಿಯಿಂದ ಉತ್ತಮ ಕಥೆಗಳಾಗಿವೆ.

* * * * *

## ಅಡಿ ಟಿಪ್ಪಣಿ

೧. ಎಂ.ವಿ.ಸೀತಾರಾಮಯ್ಯ – ಬಿಸಿಲು ಬೆಳದಿಂಗಳು – ಪುಟ ಸಂಖ್ಯೆ–೩೭

೨. ಎಂ.ವಿ.ಸೀತಾರಾಮಯ್ಯ – ಕರುಣಾಲಹರಿ – ಪುಟ ಸಂಖ್ಯೆ–೩೧

೩. ಎಂ.ವಿ.ಸೀತಾರಾಮಯ್ಯ – ರತಿದೇವಿ ಮತ್ತು ಇತರ ಕಥೆಗಳು – ಪುಟ ಸಂಖ್ಯೆ–೭

## ಅಧ್ಯಾಯ-೪

## ಎಂ.ವಿ.ಸೀ. ರವರ ಸಣ್ಣಕತೆಗಳ ವಸ್ತು

ಸಾಹಿತ್ಯ ಮನುಷ್ಯನಿಗೆ ಮುದವನ್ನು ನೀಡುತ್ತದೆ. ಅದು ಬದುಕಿನ ಚಿತ್ರಣವನ್ನು ನೀಡುತ್ತದೆ. ಸಾಹಿತ್ಯ ಜನಜೀವನದ ಆಧಾರದ ಮೇಲೆ ನಿಂತಿದೆ ಎಂದಾಗ ಸಣ್ಣಕತೆಯೂ ಅಷ್ಟೇ ಎಂದಾಯಿತು. ಸಾಹಿತ್ಯಕ್ಕೆ ಇಂತಹದ್ದೇ ವಸ್ತುವಾಗಬಲ್ಲದು, ಅಂತಹದೇ ವಸ್ತುವಾಗಬಲ್ಲದು ಎಂಬ ಇತಿಮಿತಿ ಇಲ್ಲ. ಸಮಗ್ರ ಜೀವನದ ಯಾವ ಅಂಶವಾದರೂ ಸಾಹಿತ್ಯದ ವಸ್ತುವಾಗಬಲ್ಲದು. ಹಾಗಯೇ ಸಣ್ಣಕತೆಗಳೂ ಸಹ. "ಸಣ್ಣಕತೆಯ ವಸ್ತು ಇಂತಹದೇ ಇರಬೇಕೆಂಬ ನಿಯಮವಿಲ್ಲ. ಜೀವನದ ಎಲ್ಲಾ ಅಂಶಗಳು ಅದಕ್ಕೆ ಸಾಮಗ್ರಿಯೇ ಪ್ರತಿಭಾವಂತನಾದ ಕಥೆಗಾರ ತನ್ನ ಮನವೊಪ್ಪುವ ಅಂಶವನ್ನು ಜೀವನ ಸಾಗರದಲ್ಲಿ ಮುಳುಗಿ ಹಿಡಿಯುತ್ತಾನೆ. ಕಥೆಯ ವಸ್ತುವನ್ನು ಹೊರತರುತ್ತಾನೆ". ೧ ಅದರ ಆಧಾರದ ಮೇಲೆ ಕಲೆಯ ಬಲೆಯನ್ನು ಹೆಣೆಯುತ್ತಾನೆ.

ಸಣ್ಣಕತೆಯು ಲೋಕದ ಹಾಗು-ಹೋಗುಗಳು, ಬದುಕಿನ ಘಟನೆಗಳು, ಐತಿಹಾಸಿಕ, ಪೌರಾಣಿಕ ಪ್ರಸಂಗಗಳು ವಸ್ತುವಾಗಬಲ್ಲವು. ಅದು ಗಂಭೀರವಾಗಿರಬೇಕು, ಘನತರವಾದುದಿರಬೇಕು, ಆದರ್ಶಪ್ರಾಯವಾಗಿರಬೇಕು ಎಂದೇನಿಲ್ಲ. ಕಥನಕೌಶಲ ಮುಖ್ಯವಾಗಿರಬೇಕು. ಪ್ರಸಂಗ, ಸನ್ನಿವೇಶ, ಪಾತ್ರದ ರಚನೆ, ಸಂಭಾಷಣೆ, ವಿವರಣೆ, ವರ್ಣನೆಗಳು ಈ ಅಂಶಗಳಿಂದಲೇ ಕಥೆ ನಿರ್ಮಾಣಗೊಂಡಿರುತ್ತದೆ.

ಎಂ.ವಿ.ಸೀ. ರವರ ಕಥೆಗಳಲ್ಲಿ ಮುಖ್ಯವಾಗಿ ಕಾಣುವುದು ಸಜ್ಜನಿಕೆಯ ದರ್ಶನ. "ಮನುಷ್ಯನ ಒಳ್ಳೆಯತನದ ಸಾಧ್ಯತೆ ಅದರ ಮೂಲ ವಸ್ತು ಎನ್ನಬಹುದು. ಇದರ ಹಿಂದೆ ಇರುವುದು ಮನುಷ್ಯ ಸ್ವಭಾವ ಮೂಲತಃ ಒಳ್ಳೆಯದು, ಮನುಷ್ಯನ ಅನುಭೂತಿಗಳು ಉದಾತ್ತವಾದವು ಎಂಬ ನಂಬಿಕೆ. ಮನುಷ್ಯನ ಸ್ವಭಾವವನ್ನು ಎರಡು ದೃಷ್ಟಿಗಳಿಂದ ಕಾಣಬಹುದು. ಮನುಷ್ಯನದು ಮೂಲತಃ ಮೃದು ಸ್ವಭಾವ, ರೂಕ್ಷ ಸ್ವಭಾವ; ವಿದ್ಯೆಯಿಂದ ನಾಗರೀಕ ಸಮಾಜ ಸಂಸ್ಥೆಗಳು, ಕಟ್ಟಲೆಗಳು ಇವುಗಳ ಪ್ರಭಾವದಿಂದ ಇದನ್ನು ತಿದ್ದಿ ಅವನನ್ನು ಯೋಗ್ಯ ಪ್ರಜೆಯನ್ನಾಗಿ ಮಾಡಬಹುದು ಎನ್ನುವುದು ಒಂದು ದೃಷ್ಟಿ ಮನುಷ್ಯನು ಮೂಲತಃ ಮೃದು ಸ್ವಭಾವ, ಅಂತಃಕರಣದ ಸ್ವಭಾವ, ಶಿಕ್ಷಣಕ್ಕೂ ಇದಕ್ಕೂ ಸಂಬಂಧವಿಲ್ಲವೆನ್ನುವುದು ಮತ್ತೊಂದು ದೃಷ್ಟಿ'೨.

ಅವರ ಕಥೆಗಳಲ್ಲಿ ಒಳ್ಳೆಯತನ- ದುಷ್ಟತನಗಳು ಮುಖಾಮುಖಿಯಾಗುವುದು ವಿರಳ. ಇತರ ರೀತಿಗಳಲ್ಲಿ ಅತೃಪ್ತಿ ಮೂಡುವ ಹಲವು ಕಥೆಗಳಲ್ಲೂ ಪೆಪ್ಪರಮೆಂಟು, ಬಾಚಿ ತಬ್ಬಿ ಕೊಂಡಳು, ಕಡಲೇ ಪುರಿಯ ಕೆಂಪಮ್ಮ ಇಂತಹ ಕಥೆಗಳಲ್ಲೂ ಮನುಷ್ಯನ ಮೂಲತಃ ಉದಾತ್ತೆಯ ದರ್ಶನವಾಗುತ್ತದೆ. ಇಂತಹ ಉದಾತ್ತ ಪಾತ್ರಗಳಲ್ಲಿ ಬಹುಸಂಖ್ಯೆಯವು ಅಕ್ಷರಾಭ್ಯಾಸ ಕಾಣದವು. ಅವುಗಳ ಒಳ್ಳೆಯತನ ಹುಟ್ಟನಿಂದ ಬಂದವು, ಶಿಕ್ಷಣದ ವರವಲ್ಲ. ಈ ರೀತಿ ಸ್ವಭಾವವನ್ನು ಚಿತ್ರಿಸುವ ಸಣ್ಣಕತೆಗಳನ್ನು ಎಂ.ವಿ.ಸೀ. ಬರೆದಿದ್ದಾರೆ.

## ಸಾಮಾಜಿಕ ಪರಿಸರ

ಸಂವೇದನಾಶೀಲನಾದ ಸಾಹಿತಿ ತತ್ಕಾಲದ ಸಾಮಾಜಿಕ ಆಶೋತ್ತರಗಳಿಗೆ ಸ್ಪಂದಿಸುತ್ತಾನೆ. ಸಮಸ್ಯೆಗಳನ್ನು ಸೂಕ್ಷ್ಮ ಗ್ರಹಿಕೆಯಿಂದ ವಿಶ್ಲೇಷಿಸುತ್ತಾನೆ. ತನ್ನ ಸುತ್ತಲ ಸಮಾಜದ ಬದುಕಿನ ಹಲವು ಮಜಲುಗಳು ಕೃತಿಯಲ್ಲಿ ಅನಾವರಣಗೊಳ್ಳುತ್ತವೆ. ಅಲ್ಲದೇ ನಮ್ಮ ನಿತ್ಯಜೀವನದಲ್ಲಿ ಹಲವು ಘಟನೆಗಳು ನಮ್ಮ ಕಣ್ಮುಂದೆ ನಡೆಯುತ್ತವೆ. ಈ ನಿಟ್ಟಿನಲ್ಲಿ ಎಂ.ವಿ.ಸೀ. ಸಣ್ಣಕತೆಗಳ ವಸ್ತುನಿಷ್ಠ ಅವಲೋಕನದಲ್ಲಿ ಕೃತಿ ಪಡೆದುಕೊಳ್ಳುವ ಮೌಲ್ಯ ಗಮನಾರ್ಹವಾದದ್ದು.

ಸಾಮಾಜಿಕ ಪರಿಸರದಲ್ಲಿ ಉದ್ಭವಿಸುವ ಸಮಸ್ಯಗಳು ಬಹುಮುಖಿಯಾದವು ಅವೆಂದರೆ ಹಸಿವು–ಬಡತನ, ಸಾಂಸಾರಿಕ ಜೀವನ, ತಮ್ಮ ಬದುಕಿನಲ್ಲಿ ಕಾಣುವ ದಿನನಿತ್ಯದ ಕಷ್ಟ–ಕಾರ್ಪಣ್ಯಗಳು, ಸ್ನೇಹ–ಸಜ್ಜನಿಕೆ, ಮನುಷ್ಯನ ಸಹಜ ರಾಗ_ಭಾವಗಳ ತಾಕಲಾಟಗಳು, ಬಡವರಲ್ಲೂ ಕಲವೊಂದು ಉದಾತ್ತೆಯ ಅಂಶಗಳು ಕಂಡುಬರುತ್ತವೆ ಎಂಬುದು ಅವರ ಸಾಹಿತ್ಯದಲ್ಲಿ ಚಿತ್ರಿತವಾಗಿವೆ.

ಸಮಾಜ ಎನ್ನುವುದು ವ್ಯಕ್ತಿಗಳ ಸಮುದಾಯವಾದ್ದರಿಂದ ಇವರು ಸಾಮಾಜಿಕ ಸಮಸ್ಯಗಳಿಗೂ ಪರಿಹಾರವನ್ನು ವ್ಯಕ್ತಿಗಳ ಸ್ವಭಾವದ ಸುಧಾರಣೆಯಲ್ಲಿ ಕಂಡರು. ಸಾಮಾಜಿಕ ವ್ಯವಸ್ಥೆ, ಅದರ ನಿಯಮಗಳತ್ತ ಇವರು ಹೆಚ್ಚಾಗಿ ಗಮನಹರಿಸಲಿಲ್ಲ. ಅಲ್ಲದೇ ಅವರು ವ್ಯಕ್ತಿಯ ಅನುಕಂಪ, ಔದಾರ್ಯ, ಇವುಗಳನ್ನೇ ಪ್ರಧಾನವಾಗಿ ಪರಿಗಣಿಸಿದರು. ಇದರಿಂದ ಅವರ ಕಥೆಗಳಲ್ಲಿ ಒಂದು ಬಗೆಯ ಸರಳತೆಯ ಅನಿವಾರ್ಯವಾಯಿತು. ಸರಳತೆಯೇ ಕಥೆಯ ಸಾಧನೆಗೆ ಬೇಲಿ ಕಟ್ಟಬೇಕಾಗಿಲ್ಲ. ಸರಳವಾದ ಕಥೆಯೂ ಒಳ್ಳೆಯ ಕಥೆಯಾಗಬಹುದು.

ಸಮಾಜದಲ್ಲಿ ಬದುಕುವ ಜನರಲ್ಲಿ ಅನೇಕ ರೀತಿಯ ಸಮಸ್ಯೆ, ಕಷ್ಟ, ಬಡತನಗಳಿರುತ್ತವೆ. ಅಂತವುಗಳನ್ನು ಸಾಹಿತ್ಯದ ಮೂಲಕ ಜನರಿಗೆ ಮನವರಿಕೆ ಮಾಡಿಕೊಡುವುದು ಅದರ ಮೂಲಕ ಮನಸ್ಸಿಗೆ ಸಾಂತ್ವಾನವನ್ನು ಹೇಳುವಂತದ್ದು. ಅವರ ಕಥೆಗಳಲ್ಲಿ ಸಮಾಜದ ಎಲ್ಲಾ ಸ್ತರದ ವ್ಯಕ್ತಿಗಳನ್ನು ಪರಿಚಯ ಮಾಡಿಕೊಡುವುದು ಅವರ ಉದ್ದೇಶ. ಒಂದು ಸಣ್ಣ ವಸ್ತುವು ಸಹ ಉತ್ತಮ ಕಥೆಗಾರರಲ್ಲಿ ಒಂದು ಒಳ್ಳೆಯ ಕಥೆಯಾಗಿ ಪರಿಣಾಮವನ್ನು ಸಾಧಿಸಬಹುದಾಗಿದೆ.

ಸಾಮಜಿಕ ಪರಿಸರ ಎಂದರೆ ಎಂ.ವಿ.ಸೀ. ಮೈಸೂರಿನಲ್ಲಿ ಜನಿಸಿದರು. ಅವರು ಮೈಸೂರಿನ ರಾಮಚಂದ್ರ ಅಗ್ರಹಾರದಲ್ಲಿ ವಾಸಿಸುತ್ತಿದ್ದರು. ಆದ್ದರಿಂದ ಅವರ ಕಥೆಗಳಲ್ಲಿ ಅಂದಿನ ಸಾಮಾಜಿಕ ಪರಿಸರದ ಚಿತ್ರಣವನ್ನು ಕೊಡುತ್ತಾರೆ. ಅವರ ಅಗ್ರಹಾರದಲ್ಲಿ ವಾಸಿಸುತ್ತಿದ್ದ ಎಲ್ಲಾ ಜನರ ಪರಿಚಯವನ್ನೂ, ಅವರ ವ್ಯಕ್ತಿತ್ವವನ್ನೂ, ಅಲ್ಲಿನ ಜೀವನ ಕ್ರಮ, ಆಚಾರ–ವಿಚಾರ, ಸಂಸ್ಕೃತಿ ಹಾಗೂ ಅಂದಿನ ಶ್ರೇಣಿಕೃತ ಸಮಾಜದ ವ್ಯವಸ್ಥೆಯನ್ನು ಎಳೆ–ಎಳೆಯಾಗಿ ತಮ್ಮ ಮುಂದೆ ಬಿಚ್ಚಿಡುತ್ತಾರೆ. ಅಂದಿನ ಕಾಲದಲ್ಲಿ ಜನರಲ್ಲಿ ಸಾಮಾನ್ಯವಾಗಿ ಸಂಗೀತಕ್ಕೆ ಹೆಚ್ಚು ಮಹತ್ವವಿತ್ತು. ಆದರೆ ಅಂದು ಸಂಗೀತ ಕಛೇರಿಯನ್ನು ಶ್ರೀಮಂತರ ಮನೆಗಳಲ್ಲಿ ಅಪರೂಪಕ್ಕೆ ನಡೆಸುತ್ತಿದ್ದರು ಎಂದು ವಿಷಯವನ್ನು ಪ್ರಸ್ತಾಪಿಸಿದ್ದಾರೆ.

ಅಂದಿನ ಸಮಾಜದಲ್ಲಿ ಚಿತ್ರಕಲೆಗೂ ಒಳ್ಳೆಯಸ್ಥಾನವಿತ್ತು. ಅಂದು ಸಮಾಜದಲ್ಲಿ ಜಾತಿ-ಪದ್ಧತಿ ಪ್ರಧಾನವಾಗಿತ್ತು. ಸಮಾಜದಲ್ಲಿ ಗಂಡು ಮದುವೆಯಾಗಬೇಕಾದರೆ ಹೆಣ್ಣಿನ ಕಡೆಯವರಿಗೆ ತೆರವನ್ನು ಕೊಟ್ಟು ಗಂಡು ಮದುವೆಯಾಗಬೇಕಿತ್ತು. ಅಂದು ಸಮಾಜದಲ್ಲಿ ಹಣದ ಚಲಾವಣೆಗಿಂತ ವಿನಿಮಯ ಪದ್ಧತಿ ಇತ್ತೆಂದು ತಿಳಿಯುತ್ತದೆ. ಸಮಾಜದಲ್ಲಿ ಸ್ತ್ರೀಯರಿಗೆ ಗೌರವವಿತ್ತು. ಸ್ತ್ರೀ ಸಮಾಜದ ಚೌಕಟ್ಟಿನಲ್ಲಿಯೇ ಬದುಕಬೇಕು ಎನ್ನುವ ವಾತಾವರಣವಿತ್ತು. ಎಂ.ವಿ.ಸೀ. ತಮ್ಮ ಕತೆಗಳ ಪಾತ್ರಗಳ ಮೂಲಕ ಇಂತಹ ಸಾಮಾಜಿಕ ವ್ಯವಸ್ಥೆಗೆ ಪರಿಹಾರವನ್ನು, ಸಾಂತ್ವಾನವನ್ನು ಕೊಡಲು ಪ್ರಯತ್ನಿಸಿದರು.

**ಸಾಂಸಾರಿಕ ಜೀವನ**

ಎಂ.ವಿ.ಸೀ. ರವರ ಹಲವಾರು ಸಣ್ಣಕತೆಗಳು ಒಂದು ಕೌಟುಂಬಿಕ ಅಂದರೆ ಸಾಂಸಾರಿಕ ನೆಲೆಯಲ್ಲಿ ಕಂಡುಬರುತ್ತವೆ. ಅದರಲ್ಲೂ ಹೆಚ್ಚೆಂದರೆ ಗಂಡ-ಹೆಂಡತಿ, ಒಂದು ಮಗು ಇಷ್ಟೇ ವಿಸ್ತಾರವಾದ ಕುಟುಂಬವಾಗಿರುತ್ತದೆ. ಮಧ್ಯಮ ವರ್ಗದ ಸಾಕಷ್ಟು ನೆಮ್ಮದಿ, ಪರಸ್ಪರ ಸೌಹಾರ್ದ ಉಳ್ಳ ದಸಂಪತಿಗಳ ಸಂಸಾರದ ಚಿತ್ರಣವಿರುತ್ತದೆ. ಅಲ್ಲಿಯೂ ಸರಸ ಸಲ್ಲಾಪ, ಪ್ರಣಯ ಚೇಷ್ಟೆಗಳದ್ದೆ ಪ್ರಾಧಾನ್ಯ ಕಂಡುಬಂದರೂ ಅದರಲ್ಲಿ ಅಶ್ಲೀಲವಿಲ್ಲ. ಅವರು ಯಾವ ಒಂದು ವಸ್ತುವನ್ನು ಕೇವಲವಾಗಿ ಕಾಣದೇ ಅದಕ್ಕೆ ಜೀವಕಳೆಯನ್ನು ಕೊಡುವಂತದ್ದು ಅವರ ಅನೇಕ ಕಥೆಗಳಲ್ಲಿ ಕಂಡುಬುತ್ತದೆ. ಅವರ ಯಾವ ಕಥೆಗಳೂ ಸಮಾಜದ ಚೌಕಟ್ಟನ್ನು ಮೀರಿ ಚಲಿಸುವಂತೆ ಕಂಡುಬರುವುದಿಲ್ಲ.

ಅವರ ಕಥೆಗಳಲ್ಲಿ ಸಂಸಾರದಲ್ಲಿ ಬರುವ ಕಷ್ಟ-ಸುಖ, ನೋವು-ನಲಿವು, ಪ್ರೀತಿ-ಪ್ರಣಯ ಅಲ್ಲದೇ ದಿನನಿತ್ಯದ ಬದುಕಿನಲ್ಲಿ ಕಂಡುಬರುವ ಅನೇಕ ಸಮಸ್ಯೆಗಳನ್ನು ಸೂಕ್ಷ್ಮವಾಗಿ ಓದುಗರ ಗಮನಕ್ಕೆ ತರುತ್ತಾರೆ. ಬಡತನವನ್ನು ತುಂಬಾ ಸೂಕ್ಷ್ಮವಾಗಿ ಚಿತ್ರಿಸುತ್ತಾ ಅದಕ್ಕೆ ಸಾಂತ್ವಾನ, ಅನುಕಂಪ ತೋರುವಂತೆ ಮಾಡುತ್ತಾರೆ. ಅಂತಹ ಕಥೆಗಳೆಂದರೆ ನೀಲಿಯ ಕವರು, ಸ್ನೇಹದ ಕಾಣಿಕೆ, ನಿಲ್ದಾಣಗಳ ನಡುವೆ, ಕಡಲೆ ಪ್ಮರಿಯ ಕೆಂಪಮ್ಮ ಮುಂತಾದವು.

**ನೀಲಿಯ ಕವರು**

ನವದಂಪತಿಗಳ ಜೀವನದಲ್ಲಿಯೂ ಬದುಕೆಲ್ಲ ಹಸುರಾಗಿ ಹಸನಾಗಿರುವಾಗಲೂ, ಪ್ರೇಮಾತಿಶಯವೇ ಹೇಗೆ ಅತ್ಯಲ್ಪ ವಿಷಯಗಳಲ್ಲಿ ಪ್ರಮಾದಗಳನ್ನುಂಟುಮಾಡುತ್ತದೆ ಎನ್ನುವುದು ಈ ಕತೆಯಲ್ಲಿ ಚಿತ್ರಿತವಾಗಿದೆ. ಯಾವುದಕ್ಕೂ ಸ್ವಲ್ಪ ವ್ಯವಧಾನ, ಪೂರ್ವಾಪರ ವಿವೇಚನೆ ಇದ್ದರೆ ಲೋಕದಲ್ಲಿ ಎಷ್ಟೋ ಅನಾಹುತಗಳು ತಪ್ಪಿಹೋಗುತ್ತಿದ್ದವು. ಅದಿಲ್ಲದಿದ್ದಾಗ 'ಎತ್ತು ಈಯಿತೆಂದರೆ ಕೊಟ್ಟಿಗೆ ಹುಡುಕುವ' ಬುದ್ಧಿವಂತಿಕೆಯಲ್ಲಿ ಯಾವ ಯಾವುದೋ ಗೋಜಲುಗಳು ಬಾಳಿನ ನೊಣವನ್ನು ಜೇಡನ ಬಲೆಯಲ್ಲಿ ನೂಕಿಬಿಡುತ್ತದೆ. ಬಿಡಿಸಿಕೊಂಡು ಬರುವುದು ಅಸಾಧ್ಯವೆನ್ನುವಷ್ಟು ಮಟ್ಟಿಗೆ ಇದು ಸಮಸ್ಯೆಗಳನ್ನು ತಂದೊಡ್ಡಿಬಿಡುತ್ತದೆ ಇಲ್ಲಿ ಅಂತಹ ಸಮಸ್ಯೆ ತಲೆದೋರಿಲ್ಲ.

ಸುಂದರೇಶ ಮತ್ತು ಇಂದಿರೆಯರ ನವದಾಂಪತ್ಯ ಎಲ್ಲ ವಿಧದಲ್ಲಿಯೂ ಸುಖಮಯವಾಗಿತ್ತು. ಗಂಡನ ಆಯಾಸ, ಹೆಂಡತಿಯ ಮಂದಹಾಸ ಇವೆಲ್ಲವೂ ಇದ್ದೆ ಇದ್ದವು. ಆದರೆ ಸುಂದರೇಶನ ಸ್ನೇಹಿತ ಮೂರ್ತಿ ಮದುವೆಯಾದವಳ ಹೆಸರು ಇಂದಿರೆ ಎಂದೇ ಇದ್ದರೆ ಅವನದೇನು ತಪ್ಪು! ಅವನು ಅವಳಿಗೆ ಬರೆದ ಪತ್ರವನ್ನು ಸುಂದರೇಶನಿಗೆ ಅಚಾತುರ್ಯದಿಂದ ರವಾನಿಸಿಬಿಟ್ಟ, ಕವರನ್ನು ಸುಂದರೇಶನ ಇಂದಿರೆ ಹುರಿಗಾಳು ಹಾಕಿಟ್ಟು ಪತ್ರವನ್ನು ಪತಿಗೆ ತೋರಿಸಬೇಕೆಂದಿದ್ದಳು. ಅದಕ್ಕಿಂತ ಮುಂಚೆಯೇ ಪತ್ರವನ್ನು ನೋಡಿದ ಸುಂದರೇಶ ಕಿಡಿ ಕಿಡಿಯಾಗಿ ಮನೆಬಿಟ್ಟು ಹೊರಟ ಲಾಲ್‌ಬಾಗಿಗೆ. ಮೂರ್ತಿಯನ್ನು ಸಿಕ್ಕಿದರೆ ಹೊಡೆದು ಹಾಕುವಷ್ಟು ಕೋಪ. ಈ ಕೋಪ ಮೂರು-ನಾಲ್ಕು ದಿನಗಳವರೆಗೂ ಇದ್ದೇ ಇತ್ತು. ಮತ್ತೆ ಮೂರ್ತಿಯ ಕಾಗದ ಬಂದ ಮೇಲೆ ಇವರಿಬ್ಬರ ಮನಸ್ಸು ಹದಕ್ಕೆ ಬಂದದ್ದು.

ನಿಷ್ಕಾರಣವಾಗಿ ಈ ವಿರಸ ಉಂಟಾಗಲಿಲ್ಲ. ಹೆಸರು ಇಂದಿರಾ ಎಂದಾಗಿ ಇಬ್ಬರು ಹೆಂಗಸರಿರುವುದು ಪತ್ರ ಬರೆದವನು ಅದಲು ಬದಲು ಮಾಡಿ ವಿಳಾಸ ಬರೆಯುವುದು, ವಿಳಾಸ ಬರೆದಿದ್ದರಿಂದ ಇದೇ ಕಾರಣಕ್ಕಾಗಿ ಗಂಡ-ಹೆಂಡತಿಯಲ್ಲಿ ವಿರಸ ಬಂದು ಸರಸದಲ್ಲಿ ಕೊನೆಗೊಳ್ಳುತ್ತದೆ. ಈ ಕಥೆಯಲ್ಲಿ ದೊಡ್ಡ ಕುಂದೆಂದರೆ ಸುಂದರೇಶನಿಗೆ ತನ್ನೊಡನೆ ಪತ್ರ ವ್ಯವಹಾರವನ್ನಿಟ್ಟುಕೊಂಡಿದ್ದ ಮೂರ್ತಿಯ ಬರವಣಿಗೆ ಗೊತ್ತಾಗದೇ ಇದ್ದುದು. (ಸ್ನೇಹಿತನ ಬರವಣಿಗೆ ಪರಿಚಿತವಾಗಿರಬಹುದು. ಆದರೆ ಪತ್ರದ ತಲೆಯಮೇಲೆ ಹೆಂಡತಿಯ ಹೆಸರು ಹೆಂಡತಿಯನ್ನು ಮನಸಾರೆ ಪ್ರೀತಿಸುವ ಗಂಡನಿಗೆ ಸಹಜವಾದ ಅಸೂಯೆಯ ಆವೇಶದಲ್ಲಿ ಉಳಿದ ಯಾವುದೂ ಗಮನಕ್ಕೆ ಬಾರದು ಎಂದು ಸಮಾಧಾನಕೊಡಬಹುದೇನೋ!) ಈ ತಪ್ಪೊಂದನ್ನು ಒಪ್ಪಿದರೆ ಕಥೆ ಸ್ವಾರಸ್ಯಪೂರ್ಣವಾಗಿದೆ ಎನ್ನಬೇಕು. ಇದ್ದದರಲ್ಲಿ ಹಾಸ್ಯಮಯ ವಾಗಿರುವುದು ಈ ಸಂಗ್ರಹದಲ್ಲಿ ಇದೊಂದೇ ಕಥೆ.

**ಸ್ನೇಹದ ಕಾಣಿಕೆ :**

ಎಂ.ವಿ.ಸೀ. ರವರ 'ಸ್ನೇಹದ ಕಾಣಿಕೆ' ಅತ್ಯುತ್ತಮವಾದ ಕತೆ. ಈ ಕಥೆಯ ನಾಯಕ ವೆಂಕಟೇಶಯ್ಯ ಈತ ಶಿಕ್ಷಕನಾಗಿ ಅವಿರತವಾದ ಸೇವೆ, ಪಾಠ-ಪ್ರವಚನಗಳನ್ನು ಮಾಡುತ್ತಿದ್ದನು. ಅವನ ತಂದೆ-ತಾಯಿಯರು ಸುಶೀಲಮ್ಮನೊಂದಿಗೆ ವಿವಾಹ ಮಾಡಿದರು. ಅವನ ಸಂಸಾರ ಚಿಕ್ಕ-ಚೊಕ್ಕ ಸಂಸಾರವಾಗಿರುತ್ತದೆ. ಅವರ ಸಂಸಾರದಲ್ಲಿ ಯಾವ ಕುಂದುಕೊರತೆಗಳನ್ನು ಕಾಣದೆ ಅತ್ಯಂತ ಸುಖಮಯವಾದ ಜೀವನ ನಡೆಸುತ್ತಿದ್ದರು. ಆದರೆ ವೆಂಕಟೇಶಯ್ಯನಿಗೆ ತಾಯಿ, ಒಬ್ಬ ಅಣ್ಣ ಮತ್ತು ಅತ್ತಿಗೆ ಇದ್ದರು.

ಅವರ ಸುಖ-ಸಂಸಾರದಲ್ಲಿ ಮಧ್ಯಪ್ರವೇಶಿಸಿದವನು ಸುಬ್ಬರಾಯ. ಇದ್ದಕ್ಕಿದ್ದಂತೆ ಸುಬ್ಬರಾಯ ಒಂದು ದಿನ ಇವರ ಮನೆಗೆ ಬರುತ್ತಾನೆ. ಆದರೆ ಅವನ ಸ್ಥಿತಿ ತುಂಬಾ ಕೆಟ್ಟದಾಗಿರುತ್ತದೆ. ಸುಬ್ಬರಾಯ ವೆಂಕಟೇಶಯ್ಯನ ಬಾಲ್ಯ ಗೆಳೆಯನಾಗಿದ್ದನು. ಸುಬ್ಬರಾಯನಿಗೆ ಮದುವೆಯಾಗಿ

ಹೆಂಡತಿ ತೀರಿಹೋಗಿ ಅವನು ಜೀವನ ಮಾಡುವುದಕ್ಕೂ ಕಷ್ಟವಾಗಿ, ನಲೆಯಿಲ್ಲದೆ ಅಲ್ಲಿ-ಇಲ್ಲಿ ಕಾಲ ಕಳೆಯುತ್ತಾ ಜೀವನ ನಡೆಸುತ್ತಿದ್ದನು. ಸುಬ್ಬರಾಯ ವೆಂಕಟೇಶಯ್ಯನ ಮನೆಗೆ ಬಂದಾಗ ಅವನನ್ನು ಪ್ರೀತಿ, ವಿಶ್ವಾಸದಿಂದ ಕಾಣುತ್ತಾನೆ. ಸುಬ್ಬರಾಯ ವೆಂಕಟೇಶಯ್ಯನನ್ನು ಒಂದೆರಡುದಿನ ನನಗೆ ಕೆಲಸ ಸಿಗುವವರೆಗೂ ನಿಮ್ಮ ಮನೆಯಲ್ಲಿ ಜಾಗ ಕೊಟ್ಟರೆ ಸಾಕು ಎಂದು ಕೇಳುತ್ತಾನೆ. ಆದರೆ ವೆಂಕಟೇಶಯ್ಯ ತನ್ನ ಹೆಂಡತಿಯ ಒಪ್ಪಿಗೆಯನ್ನು ಕೇಳಿದಾಗ ಅವಳು ಒಲ್ಲದ ಮನಸ್ಸಿನಿಂದ ಒಪ್ಪಿಕೊಳ್ಳುತ್ತಾಳೆ. ಸುಬ್ಬರಾಯನಿಗೆ ಅವರ ಮನೆಯಲ್ಲಿ ಜಾಗ ದೊರೆಯುತ್ತದೆ. ಇವನು ಮನೆಗೆ ಮೊದಲು ರೇಡಿಯೋ ತರುವ ಜವಾಬ್ದಾರಿಯನ್ನು ವಹಿಸಿಕೊಂಡು ಅದರ ಮೂಲಕ ಲಾಭ ಪಡೆಯುತ್ತಾನೆ. ಆದರೆ ವೆಂಕಟೇಶಯ್ಯ ಸುಬ್ಬರಾಯನ ಮೇಲೆ ಅನುಮಾನ ಪಡುವುದಿಲ್ಲ.

ಸುಬ್ಬರಾಯನು ಅವರ ಮನೆಗೆ ಹೊಂದಿಕೊಂಡ ಮೇಲೆ ಮನೆಯ ಜವಾಬ್ದಾರಿಯನ್ನೆಲ್ಲಾ ಇವನೇ ವಹಿಸಿಕೊಳ್ಳುತ್ತಾನೆ. ಅಲ್ಲದೇ ಅವನು ಮನೆಯ ಎಲ್ಲಾ ಕೆಲಸವನ್ನು ಮಾಡುತ್ತಾನೆ. ಪ್ರತಿದಿನ ಸಾಮಾನು ತರುವಂತ ಕೆಲಸವನ್ನು ಮಾಡುತ್ತಾನೆ. ಆದ್ದರಿಂದ ಅವನು ಮನೆಯವರಿಗೆಲ್ಲಾ ಮೆಚ್ಚಿಗೆಯಾಗಿರುತ್ತಾನೆ. ವೆಂಕಟೇಶಯ್ಯನ ಸಂಸಾರದಲ್ಲಿ ಇವನು ಒಬ್ಬನಾಗಿರುತ್ತಾನೆ. ಇಲ್ಲಿ ಸುಬ್ಬರಾಯನ ಆಗಮನದಿಂದ ವೆಂಕಟೇಶಯ್ಯನ ಜವಾಬ್ದಾರಿ ಕಡಿಮೆಯಾಗಿ ಅವನು ನಿಶ್ಚಿಂತೆಯಾಗಿ ಕೆಲಸ ಮಾಡುತ್ತಿದ್ದನು. ಸುಬ್ಬರಾಯನ ಗುಣಗಳು ಮೊದ-ಮೊದಲು ಸಾವಿತ್ರಮ್ಮನಿಗೆ ಅಸಡ್ಡೆಯಾಗಿ ಕಂಡುಬಂದರೂ ಅವನ ಕೆಲಸ-ಕಾರ್ಯಗಳಿಂದ ಅವಳಿಗೂ ಅವನ ಬಗ್ಗೆ ಪ್ರೀತಿ, ವಿಶ್ವಾಸ ಮೂಡಿತು. ವೆಂಕಟೇಶಯ್ಯ ಮತ್ತು ಸಶೀಲಮ್ಮನವರ ಸಂಸಾರದಲ್ಲಿ ಮಕ್ಕಳಿಲ್ಲದಿರುವುದು ಒಂದು ಕೊರತೆ ಬಿಟ್ಟರೆ ಅವರ ಸಂಸಾರ ಸುಂದರವಾದುದು.

ಸಶೀಲಮ್ಮನ ಗಂಡ ಮನೆಗೆ ಲೇಟಾಗಿ ಬರುತ್ತಿದ್ದ. ಆದರೂ ಮನೆಯವರಿಗೆಲ್ಲ ಮೆಚ್ಚುಗೆ, ಪ್ರೀತಿ, ವಿಶ್ವಾಸಕ್ಕೆ ಗುರಿಯಾದ ಸುಬ್ಬರಾಯ ಸಶೀಲಗೆ ಸುಬ್ಬರಾಯನ ಮೇಲೆ ಅನುಕಂಪ, ಪ್ರೀತಿ ಬೆಳೆದು ಗಂಡ ಶಾಲೆಯಲ್ಲಿ ಪ್ರವಾಸಕ್ಕೆ ಹೋದಾಗ ಸುಬ್ಬರಾಯನ ಕೃಪೆಯಿಂದ ಸುಶೀಲಮ್ಮ ಗರ್ಭವನ್ನು ಧರಿಸುತ್ತಾಳೆ. ಆದರೆ ಅಷ್ಟುತ್ತಿಗೆ ಸುಬ್ಬರಾಯ ಮನೆ ಬಿಡುವುದೆಂದು, ಬೇರೊಂದು ಮನೆ ಮಾಡಿರುವುದಾಗಿ ಹೇಳುತ್ತಾನೆ. ಅದರಂತೆ ಅವನು ಬೇರೊಂದು ಮನೆಯನ್ನು ಮಾಡಿ ಮದುವೆಯಾಗಿ ಸಂಸಾರ ಸಾಗಿಸುವಂತದ್ದು ಕಾಣುತ್ತದೆ.

ಸಶೀಲಮ್ಮ ಗರ್ಭಧರಿಸಿರುವುದನ್ನು ಅವಳ ಗಂಡ ವೈದ್ಯರಿಂದ ತಿಳಿದು ಖುಷಿಪಟ್ಟು ಅವಳನ್ನು ಕೇಳಿದಾಗ ಅವಳಿಗೆ ನಾನು ಗಂಡನಿಗೆ ಮೋಸ ಮಾಡುತ್ತಿದ್ದೇನೆ ಎಂದು ಅವಳ ಮನಸ್ಸಿನಲ್ಲಿ ದುಃಖವುಟಾಂಗುತ್ತದೆ. ಕೊನೆಗೆ ಗಂಡನಿಗೆ ನಾನು ಅಪರಾಧ ಮಾಡಿದ್ದೇನೆ ಎಂದು ಕೊರಗು ಒಂದುಕಡೆ ಆದರೆ ಮತ್ತೊಂದು ಕಡೆ ನೈತಿಕ ಪ್ರಜ್ಞೆ ಅವಳನ್ನು ಕಾಡುವಂತದ್ದು ತುಂಬಾ ಅರ್ಥವತ್ತಾಗಿದೆ.

**ಕೊಟ್ಟಣದ ನೀಲಮ್ಮ :**

ಈ ಕಥೆ ಒಂದು ಸಾಂಸಾರಿಕ ಜೀವನವನ್ನು ಯಥಾವತ್ತಾಗಿ ಕಟ್ಟಿಕೊಡುವಂತ ಕಥೆಯಾಗಿದೆ. ಕೊಟ್ಟಣದ ನೀಲಮ್ಮ ಬಡ ಕುಟುಂಬದ ಹೆಣ್ಣುಮಗಳು. ಅವರ ತಂದೆ-ತಾಯಿಗಳು ಆಸ್ತಿ

ಸಿಗುತ್ತದೆ ಎನ್ನುವ ಕಾರಣಕ್ಕೆ ಮಧ್ಯವಯಸ್ಕನಿಗೆ ನೀಲಮ್ಮನನ್ನು ಮದುವೆಮಾಡಿ ಕೊಡುತ್ತಾರೆ. ಅವಳ ಗಂಡ ಮತ್ತು ಅತ್ತೆ ಇಬ್ಬರೂ ದುಂದುವೆಚ್ಚ ಮಾಡುವವರಾಗಿ ಅವರ ಹತ್ತಿರ ಇದ್ದ ಹಣ ಮತ್ತು ಆಸ್ತಿಯನ್ನು ಮಾರಿ ಬರಿಗೈಯಾಗಿದ್ದರು. ಗಂಡ ಮತ್ತು ಅತ್ತೆಗೆ ಕೂಲಿ ಕೆಲಸ ಮಾಡಲು ಆಗುತ್ತಿರಲಿಲ್ಲ. ಅವರ ಜೀವನಕ್ಕೆ ನೀಲಮ್ಮ ಆಧಾರ. ಅವಳನ್ನು ನಾಟಕಕ್ಕೆ ಸೇರಿಸಿದರೆ ನಮ್ಮ ಜೀವನಕ್ಕೆ ಅನುಕೂಲವಾಗುತ್ತದೆಂದು ಹಾಗೂ ನೀಲಮ್ಮಳಿಗೆ ಹೊಟ್ಟೆ ತುಂಬಿಸಿಕೊಳ್ಳುವುದಕ್ಕೆ ಒಂದು ಸರಿ ಆಗುತ್ತದೆಂದು ತಿಳಿದು ಅರೆಮನಸ್ಸಿನಿಂದ ನಾಟಕದ ಅಭಿನಯಕ್ಕೆ ಒಪ್ಪಿಗೆ ಸೂಚಿಸಿದಳು. ಆದರೆ ನಾಟಕದ ಕಂಪನಿಯಲ್ಲಿ ರಾಜಾ ಪಾರ್ಟ್ ಮಾಡುತ್ತಿದ್ದ ಶಾಮರಾಯ ನೀಲಮ್ಮ ಮತ್ತು ಅವರ ಮನೆಯವರಿಗೆ ನಾಟಕಕ್ಕೆ ಸೇರುವುದು ಬೇಡ ನಿಮ್ಮ ಜೀವನೋಪಾಯಕ್ಕೆ ಅರಮನೆಯಲ್ಲಿ ಕೆಲಸಕೊಡಿಸುತ್ತೇನೆ ಎಂದು ಹೇಳಿ ಕೆಲಸ ಕೊಡಿಸುತ್ತಾನೆ. ನೀಲಮ್ಮನಿಗೆ ಅರಮನೆಯ ವಾತಾವರಣ ಹಿಡಿಸಲಿಲ್ಲ ಜೊತೆಗೆ ಅವಳು ಶೀಲ-ಮಾನಕ್ಕೆ ಅಪಾರವಾದ ಗೌರವ ಕೊಡುತ್ತಿದ್ದಳು. ಆದ್ದರಿಂದ ಆ ಕೆಲಸವನ್ನು ಬಿಟ್ಟು ಮುಂದೆ ಶಾಮರಾಯರ ಸಹಕಾರದಿಂದ ಭತ್ತ ಕುಟ್ಟುವ ವೃತ್ತಿಯನ್ನು ಕೈಗೊಂಡು ತನ್ನ ಸಂಸಾರವನ್ನು ನಿರ್ವಹಿಸುವುದು ಕಂಡುಬರುತ್ತದೆ. ಅವಳ ಗಂಡ ಭಂಗಿ ಸೊಪ್ಪಿನ ಚಟಕ್ಕೆ ಬಲಿಯಾಗಿ ಅನಾರೋಗ್ಯಪೀಡಿತನಾಗಿದ್ದರಿಂದ ಅವನಿಂದ ದೂರವಿದ್ದಳು. ಇದು ಅವರ ಅತ್ತೆಗೆ ಸರಿಕಾಣಿಸುತ್ತಿರಲಿಲ್ಲ. ನೀಲಮ್ಮ ಗಂಡ ಮತ್ತು ಅತ್ತೆಯ ಮೇಲೆ ಅಪಾರವಾದ ಗೌರವವನ್ನು ಇಟ್ಟುಕೊಂಡಿದ್ದಳು.

ಕೊನೆಗೆ ಅತ್ತೆ ಸತ್ತ ನಂತರ ಅವಳ ಗಂಡನೂ ಅನಾರೋಗ್ಯದಿಂದ ಸಾಯುತ್ತಾನೆ. ಆದರೆ ಈ ಕಥೆಯಲ್ಲಿ ಕೊಟ್ಟಣದ ನೀಲಮ್ಮನ ವ್ಯಕ್ತಿತ್ವ ಮತ್ತು ಪತಿವ್ರತೆಯಂತೆ ಜೀವನ ನಡೆಸುತ್ತಿರುವುದು ಕಂಡುಬರುತ್ತದೆ. ಅವಳು ವಿದ್ಯಾವಂತೆ ಅಲ್ಲದಿದ್ದರೂ ಬಸವಣ್ಣನ ಪ್ರಭಾವಕ್ಕೊಳಗಾಗಿ ಅವನ ಮೇಲೆ ಅಪಾರವಾದ ಭಕ್ತಿ ಇಟ್ಟುಕೊಂಡು ಅವನೇ ತನ್ನ ಗಂಡ ಎಂದು ಬದುಕಿದ್ದವಳು ನೀಲಮ್ಮ. ಈ ಕಥೆಯಲ್ಲಿ ಮೈಸೂರಿನ ಅಂದಿನ ಜೀವನ ಚಿತ್ರಣ, ರಾಜರ ಆಡಳಿತ, ನಾಟಕಕ್ಕೆ ಅಂದು ಇದ್ದ ಪ್ರಾಮುಖ್ಯತೆ ಒಟ್ಟಾರೆ ಒಂದು ಸಾಂಸ್ಕೃತಿಕವಾದ ಬದುಕಿನ ಚಿತ್ರಣವನ್ನು ಲೇಖಕರು ನಮ್ಮ ಕಣ್ಣಿಗೆ ಕಟ್ಟುವಂತೆ ಚಿತ್ರಿಸಿದ್ದಾರೆ ಆದ್ದರಿಂದ ಇದು ಒಂದು ಉತ್ತಮ ಕಥೆಯಾಗಿದೆ.

ಎಂ.ವಿ.ಸೀ.ರವರ ಸಣ್ಣಕತೆಗಳು ಒಂದು ಕುಟುಂಬದ ಚೌಕಟ್ಟಿನಲ್ಲಿ ಸಾಂಸಾರಿಕ ಜೀವನವನ್ನು ನಡೆಸುವಂತದ್ದು ಮತ್ತು ಅಲ್ಲಿ ಕಂಡುಬರುವ ಸಣ್ಣ ಘಟನೆಯನ್ನು ಓದುಗರಿಗೆ ಪರಿಚಯ ಮಾಡಿಕೊಡುವಂತದ್ದು ಮತ್ತು ಸಂಸಾರದ ಸೂಕ್ಷ್ಮ ವಿಚಾರಗಳನ್ನು ತಿಳಿಸುವಂತದ್ದು ಮೇಲಿನ ಕಥೆಗಳಿಂದ ತಿಳಿದುಬರುತ್ತದೆ.

**ಧಾರ್ಮಿಕ ಪರಿಸರ :**

ಎಂ.ವಿ.ಸೀ.ಯವರ ಹಲವು ಕಥೆಗಳಲ್ಲಿ ಮಾಸ್ತಿಯವರು ಇಟ್ಟುಕೊಂಡ ಒಂದು ಧಾರ್ಮಿಕ ಶ್ರದ್ಧೆ ಇವರಲ್ಲಿಯೂ ಅಂತಹ ಧಾರ್ಮಿಕ ಶ್ರದ್ಧೆ ಇದೆಯೇನೂ ಎಂದು ಓದುಗರಿಗೆ ಅರಿವಾಗುತ್ತದೆ.

ಅವರ ಅನೇಕ ಕಥೆಗಳಲ್ಲಿ ಧಾರ್ಮಿಕತೆಯನ್ನು ಚಿತ್ರಸುವ, ವೈಭವೀಕರಿಸುವ, ಒಪ್ಪಿಕೊಳ್ಳುವ ಅಂಶಗಳು ಕಂಡುಬರುತ್ತವೆ. ಇದರಿಂದ ಅವರಲ್ಲಿ ಧಾರ್ಮಿಕ ನಂಬಿಕೆ ಇರುವುದು ತಿಳಿಯುತ್ತದೆ.

ಅವರ ಕಥೆಗಳಲ್ಲಿ ಜನಜೀವನದಲ್ಲಿ ಹಾಸುಹೊಕ್ಕಾಗಿರುವ ಧರ್ಮ, ದೇವರು ಎಂಬ ಕಲ್ಪನೆ ಜನತೆಯಲ್ಲಿ ಸೌಹಾರ್ದ, ಸ್ನೇಹ ಮನೋಭಾವನೆಯನ್ನು ಉಂಟುಮಾಡಬೇಕು. ಆದರೆ ಕ್ರೌರ್ಯ, ದ್ವೇಷ, ಅಸಹನೆ, ಅಸಹಕಾರಗಳನ್ನು ಬೆಳೆಸುವುದೇ ಹೆಚ್ಚು. ಮನಸ್ಸಿನ ಶಾಂತಿಗಾಗಿ ನಂಬುವ ದೇವರು ಮನಃಕ್ಷೇಶಕ್ಕೆ, ಸಂಘರ್ಷಕ್ಕೆ ಕಾರಣವಾಗುವುದು ವಿಪರ್ಯಾಸ. ಧಾರ್ಮಿಕ ನಂಬಿಕೆ, ಧೈವಭಕ್ತಿ ಮನುಷ್ಯನನ್ನು ಹರಳಿಸುವಂತ ಕೆಲಸ ಅನೇಕ ಕಥೆಗಳಲ್ಲಿ ಕಂಡುಬರುತ್ತವೆ. ಅವೆಂದರೆ ನಿಲ್ದಾಣಗಳ ನಡುವೆ, ನೂರನಲವತ್ತೆರಡು ಇಂತಹ ಕಥೆಗಳು ತುಂಬಾ ಗಮನಾರ್ಹವಾದವು.

ಈ ಕಥೆಗಳಲ್ಲಿ ಕಾಣುವ ಮುಸ್ಲಿಂ ಜನಾಂಗಕ್ಕೆ ಸೇರಿದ ಯಾಕೂಬ್ ನಾಗಲೀ, ಜಟಕಾ ಸಾಬಿಯಾಗಲೀ, ಹಿಂದೂ ಧರ್ಮದ ಬಗ್ಗೆ, ಹಿಂದೂ ದೇವರ ಬಗ್ಗೆ ಅಪಾರವಾದ ನಂಬಿಕೆ, ಶ್ರದ್ದೆ, ಭಕ್ತಿ ಭಾವಗಳು ಅವರಲ್ಲಿ ಕಾಣುತ್ತವೆ. ಈ ಕಥೆಗಳಲ್ಲಿ ಸಂಘರ್ಷಗಳಿಗೆ ಅವಕಾಶವಿಲ್ಲ.

ನೂರ ನಲವತ್ತೆರಡು ಎಂಬ ಕಥೆ ತುಂಬಾ ಗಮನಾರ್ಹವಾದದ್ದು ಈ ಕಥೆಯಲ್ಲಿ ಮೊದಲು ಕಂಡುಬರುವ ಸಾಬಿಯಾಗಲೀ ಅನಂತರ ಕಂಡುಬರುವ ಅವನ ಮಗನಾಗಲೀ ಇಬ್ಬರಿಗೂ ಸಾಕಷ್ಟು ವ್ಯತ್ಯಾಸಗಳಿವೆ. ಮೊದಲು ಕಂಡುಬರುವ ಸಾಬಿ ಉದಾರವಾದಿ, ಅನುಕಂಪ, ಧಾರಳಾತನ ಕಂಡುಬಂದರೆ ಅವನ ಮಗ ಜಿಪುಣನಂತೆ ಕಂಡುಬರುತ್ತಾನೆ. ಧಾರ್ಮಿಕ ವಿಚಾರದ ದೃಷ್ಟಿಯಿಂದ ನೋಡುವುದಾದರೆ ಈತ ಮುಸಲ್ಮಾನನಾಗಿ ಆಡುವ ಮಾತುಗಳು ತುಂಬಾ ಅರ್ಥವತ್ತಾಗಿವೆ. ಇಲ್ಲಿ ಕಥೆಯ ನಿರೂಪಕನು ಜಟಕಾ ಬಂಡಿಯವನಿಗೆ ಹಣ ಕೊಡಬೇಕಾಗಿರುತ್ತದೆ. ಅದಕ್ಕೆ ಆ ಜಟಕಾ ಸಾಬಿ, ತನ್ನ ಹೆಸರನ್ನು ಹೇಳಲು ನಿರಾಕರಿಸಿ, ತನ್ನ ವಿಳಾಸವನ್ನು ಹೇಳುವುದಿಲ್ಲ. ಆತ ಹೇಳುವುದು ಇಷ್ಟೆ "ನಾನು ಸಿಕ್ಕದೇ ಹೋದರೆ ನನಗೆ ಕೊಡಬೇಕಾದ ಹಣವನ್ನು ನನ್ನ ಹೆಸರು ಹೇಳಿ ಯಾವುದಾದರೂ ದೇವರಿಗೆ ಹಣ್ಣು-ಕಾಯಿ ಮಾಡಿಸಿ" ಎನ್ನುತ್ತಾನೆ. ಒಬ್ಬ ಮುಸಲ್ಮಾನನಾಗಿ ಅಲ್ಲಾನಲ್ಲಿ ಭಕ್ತಿ ಇರುವವನ ಬಾಯಿಯಲ್ಲಿ ಬರುವ ಈ ಮಾತಿನ ಔದಾರ್ಯವನ್ನು ಗಮನಿಸಬೇಕು. ಈ ಕಥೆಯಲ್ಲಿ ಕಥೆಗಾರನ ತಂತ್ರ ಅಡಗಿರುವುದು ಕಂಡುಬರುತ್ತದೆ. ಇಲ್ಲಿವಸ್ತು ಮುಸಲ್ಮಾನನ್ನು ಕುರಿತು ಆಗಿದ್ದರೂ ಅವನಲ್ಲಿ ಹೊರಡುವ ಮಾತುಗಳು ಗಮನಾರ್ಹವಾದವು. ಇಲ್ಲಿ ಆತ ಹಿಂದೂ ದೇವರ ಮೇಲೆ ನಂಬಿಕೆ, ನಿಷ್ಟೆ, ಭಕ್ತಿ ಇರುವುದು ಕಂಡುಬರುತ್ತದೆ.

ನನ್ನ ಬ್ರಾಹ್ಮಣಿಕೆ ಕಥೆಯಲ್ಲಿಯೂ ಸಹ ಇಂತಹ ಒಂದು ಧಾರ್ಮಿಕ ವಿಚಾರವುಳ್ಳ ಕಥೆಯಾಗಿದೆ. ಇದು ಒಂದು ಘಟನಾ ಪ್ರಧಾನವಾದ ಸ್ವಾರಸ್ಯಕರವಾದ ಕತೆಯಾಗಿದೆ. ಶಾಸ್ತ್ರಿಗಳು ಹಣದ ಆಸೆಗಾಗಿ ಕಾಟಾಚಾರದ ಭಕ್ತಿಯನ್ನು ತೋರಿಸುವಂತದ್ದು ಕಥೆಯ ವಸ್ತು. ಶಾಸ್ತ್ರಿಗಳು ಒಂದು ದಿನ ಕಥೆಗಾರನ ಮನೆಗೆ ಬಂದು ಹೋಗಿರುತ್ತಾನೆ. ಆದರೆ ಅವನು ಶಾಸ್ತ್ರಿಗಳಿಗೆ ಸಿಕ್ಕಿರಲಿಲ್ಲ.

ನಂತರ ಶಾಸ್ತ್ರಿಗಳು ಇವತ್ತು ನಿಮ್ಮಿಂದ ಒಂದು ಉಪಕಾರ ಆಗಬೇಕಲ್ಲ ಎಂದು ಕೇಳುತ್ತಾನೆ. ಅದೇನೆಂದರೆ ಜಡ್ಜ್ ಸಾಹೇಬರ ಮನೆಯಲ್ಲಿ ಶ್ರಾದ್ಧ, ನೀವು ಬ್ರಾಹ್ಮಣರಾಗಿ ಬರಬೇಕು. ಮೂರು ವರ್ಷದಿಂದ ಬರುತ್ತಿದ್ದ ಆಸಾಮಿ ಚೆಕ್ಕರ್ ಕೊಟ್ಟ. ಈ ರೀತಿ ಹಣದ ಆಸೆಗಾಗಿ ಜಾತಿ–ಧರ್ಮಗಳು ಬದಲಾಗುತ್ತವೆ ಎಂಬುದನ್ನು ಒಂದು ಉದಾಹರಣೆ ಮೂಲಕ ತಿಳಿಸಿದಂತೆ ಹೇಳಲಾಗಿದೆ.

'ನಿಲ್ದಾಣಗಳ ನಡುವೆ' ತುಂಬಾ ಗಮನಾರ್ಹವಾದ ಕಥೆಯಾಗಿದೆ. ಇಲ್ಲಿ ಒಬ್ಬ ಮುಸ್ಲಿಂ ವ್ಯಕ್ತಿಯಾದವನು ಹಿಂದೂ ದೇವರ ಬಗ್ಗೆ ಅಪಾರವಾದ ಭಕ್ತಿ, ಶ್ರದ್ಧೆ ಕಂಡುಬರುತ್ತವೆ. ಅವನ ಅನುಭವದ ಮಾತುಗಳು ಅರ್ಥಗರ್ಭಿತವಾಗಿ ಕಂಡುಬರುತ್ತವೆ. ಈ ಕಥೆಯ ನಾಯಕ ಯಾಕೂಬ್ ಪಾಕಿಸ್ತಾನ, ದುಬೈಗೆ ಹೋಗಿ ಅಲ್ಲಿ ಕಷ್ಟ ಯಾತನೆಗಳನ್ನು ಅನುಭವಿಸಿ ಮತ್ತೆ ಭಾರತಕ್ಕೆ ಹಿಂತಿರುಗಿ ಬಂದಾಗ ಅವನ ಅನುಭವಗಳನ್ನು ಈ ರೀತಿ ಹೇಳುತ್ತಾನೆ. "ನಮ್ಮ ರಂಗನಾಥ ಸ್ವಾಮಿಗೂ..... ಶ್ರೀರಂಗಪಟ್ಟಣಕ್ಕೂ ಸಲಾಂ ಹಾಕಿ ಬೀಸ್ ವರ್ಷ ಆಯ್ತು" ಎಂದು ಒಬ್ಬ ಮುಸ್ಲಿಂ ವ್ಯಕ್ತಿ ಭಕ್ತಿಪೂರ್ವಕ ರೀತಿಯಲ್ಲಿ ಮಾತನಾಡುತ್ತಾನೆ. ಅವನು ಮಾತನ್ನು ಮುಂದುವರೆಸುತ್ತಾ "ಸೀರಂಗಪಟ್ನ ಅಂತಾ ಹೇಳತ್ಲು ಇನ್ ಕೇಳ್ಬೇಕೆ ಮಲ್ಗಿರೋ ರಂಗ್ನಾಥ ಎದ್ದು ಬಂದು ನಮ್ಮ ಮೂವರನ್ನು ಬಾಚಿ ತಬ್ಬಿಕೊಂಡು ಹಾಗಾಯಿತು..... ಇದೇನು ಮಾತು ಮಾತ್ಕೂ ರಂಗನಾಥ ಅಂತಾನೇ ಈ ತುರ್ಕಪ್ಪ ಅಂತ ನೀವು ಆಶ್ಚರ್ಯ ಬೀಳಬಹುದು" ಎಂದು ಆ ಮುಸ್ಲಿಂ ವ್ಯಕ್ತಿ ನುಡಿಯುತ್ತಾನೆ. ಹೀಗೆ ಎಂ.ವಿ.ಸೀ. ರವರು ಪಾತ್ರ ಪೋಷಣೆಗಳ ಮೂಲಕ ಹಿಂದೂ ಧರ್ಮದ ಉದಾತ್ತತೆಯನ್ನು ಮನವರಿಕೆ ಮಾಡಿಕೊಡುತ್ತಾರೆ.

**ಸ್ತ್ರೀಯರ ಚಿತ್ರಣ :**

ಎಂ.ವಿ.ಸೀ.ರವರ ಕಥೆಗಳು ಎನ್ನುವುದಕ್ಕಿಂತ ಅವರ ಸಾಹಿತ್ಯದಲ್ಲಿ ಸ್ತ್ರೀಯರಿಗೆ ಗೌರವವನ್ನು ಕೊಡುವುದು ಅವರ ಮುಖ್ಯ ಕಾಳಜಿ. ಅವರು ಅಶ್ಲೀಲದ ಬಗ್ಗೆ ಈ ರೀತಿ ಅಭಿಪ್ರಾಯ ಪಡುತ್ತಾರೆ. "ಶ್ಲೀಲ–ಅಶ್ಲೀಲದ ಪ್ರಶ್ನೆ ಎಲ್ಲಾ ಕಾಲದಲ್ಲೂ ಇದ್ದದ್ದೆ ಆದರೆ ಇತಿ–ಮಿತಿ ಮಾತ್ರ ಕಾಲ ಕಾಲಕ್ಕೆ, ವ್ಯಕ್ತಿಯಿಂದ ವ್ಯಕ್ತಿಗೆ ಏರುಪೇರಾಗುತ್ತಾ ಇರುತ್ತದೆ"೩.

ಅಶ್ಲೀಲ ವಸ್ತುವನ್ನು ಗಂಭಿರವಾಗಿ ಹೇಳಬಹುದು, ಎನ್ನುವುದನ್ನು ತೋರಿಸುವುದಕ್ಕಾಗಿ ಸ್ನೇಹದ ಕಾಣಿಕೆ ಎಂಬ ಕಿರು ಕಾದಂಬರಿಯನ್ನು ಬರೆದರು. ಎಂ.ವಿ.ಸೀ. ರವರು ಬರೆದ ಭಾಗ್ಯಲಕ್ಷ್ಮಿ ಎಂಬ ಕಾದಂಬರಿಯಲ್ಲಿ 'ಪ್ರಸ್ತ' ಎಂಬ ಮಾತು ಬಂದಿದೆ. ಅದನ್ನು ಹುಡುಗರು ವಿಶೇಷವಾಗಿ ಗಮನಿಸಬಾರದು ಎಂದು ಅಭಿಪ್ರಾಯಪಟ್ಟು ಪಠ್ಯಪುಸ್ತಕ ಸಮಿತಿಯವರು ಉದ್ದಕ್ಕೂ ಆ ಮಾತನ್ನು ತೆಗೆದುಹಾಕುವ ನಿಂದನೆ ಹಾಕಿ, ಆ ಪುಸ್ತಕವನ್ನು ಪಠ್ಯಪುಸ್ತಕವಾಗಿ ನೇಮಕ ಮಾಡಿದರು. ಇದು ಆಗಿನ ಕಾಲದ ಸಾಹಿತ್ಯ ಕ್ಷೇತ್ರದ ಕೆಲವು ಹಿರಿಯರ ದೃಷ್ಟಿ. ಎಂ.ವಿ.ಸೀ. ರವರ ದೃಷ್ಟಿಯು ಅದೇ, ಕನ್ನಡ ಸಾಹಿತ್ಯ ಶುದ್ಧವಾಗಿರಬೇಕೆಂದು ಏಕೈಕ ಅಭಿಪ್ರಾಯವನ್ನು ತಾಳಿರುವ ಸೀತಾರಾಮಯ್ಯ ಯಾವ ಸಾಹಿತ್ಯ ಪ್ರಕಾರಕ್ಕೂ ಒಳಗಾಗದೇ ತಮ್ಮದೇ ಆದ ಖಚಿತ ಭಾವನನೆಗಳನ್ನು ಹೊಂದಿದ್ದಾರೆ.

ಕಲೆಗಾರನ ದೃಷ್ಟಿಯು ಎಷ್ಟು ದೂರ ವ್ಯಾಪಕವಾಗಿದೆ ಇದರ ಇಂಗಿತಜ್ಞತೆ ಎಷ್ಟು ಗಾಢವಾಗಿದೆ, ಅದರಲ್ಲಿ ಎಷ್ಟು ಹೃದಯದ ಮರುಕ ಹೊರಹೊಮ್ಮಿದೆ ಮುಂತಾದ ವಿಷಯವನ್ನು ಅರ್ಥಮಾಡಿಕೊಳ್ಳಬೇಕಾದರೆ ನಾವು ಅವನ ಕುಂಚದಿಂದ ನಿರ್ಮಿತವಾದ ವಿವಿಧ ಪಾತ್ರಗಳ ಕಡೆ ನೋಡಬೇಕು. ಆ ಪಾತ್ರಗಳ ವೈವಿಧ್ಯ ಹೆಚ್ಚಿದಷ್ಟು ಅವುಗಳ ಪರಸ್ಪರ ವಿರುದ್ಧ ಸ್ವರೂಪ ಮೂರ್ತಿ ಮತ್ತಾಗಿ ಚಿತ್ರಿತವಾದಷ್ಟು ಅವುಗಳನ್ನು ನಿರ್ಮಿಸಿದ ಕಲೆ ಉತ್ತಮವಾದುದೆಂದು ನಾವು ಸುಲಭವಾಗಿ ಪರಿಗಣಿಸಬಹುದು.

ಈ ದೃಷ್ಟಿಯಿಂದ ಈ ಸಂಕಲನದಲ್ಲಿ ಬರುವ ಸ್ತ್ರೀ ಪಾತ್ರಗಳನ್ನು ವಿಮರ್ಶಿಸಬಹುದು. ಈ ದೃಷ್ಟಿಯಿಂದಲೂ 'ದೃಷ್ಟಿ ಲಾಭ' ದ ಸ್ತ್ರೀಯರೇ ಕಣ್ಮುಂದೆ ಕಟ್ಟಿದಂತೆ ನಿಲ್ಲುತ್ತಾರೆ. ಶಾರದಮ್ಮನ ಪ್ರೀತಿಪ್ರೇಮವು ಈ ಕಥೆಯಲ್ಲಿ ನಿಚ್ಚಳವಾಗಿ ನಿರ್ಮಿತವಾಗಿದೆ. ಅವಳಿಗಿರುವ ಚಿತ್ತಶುದ್ಧಿ, ಕಾರ್ಯಶ್ರತದ್ಧೆಗಳು ಶಿವರಾಮಯ್ಯನಿಗೆ ಇಲ್ಲ. ಅವನಿಗೆ ಸಂಗೀತ ಬಂದರೇನು? ಅದನ್ನು ರೂಢಿಸಿಕೊಂಡು ಕಣ್ಣುಬಂದ ಜೀವನವನ್ನು ಬೆಳಕಾಗಿಸುವ ಬುದ್ಧಿ ಅವನಿಗಿಲ್ಲ. ಶಾರದಮ್ಮ ಸಹನೆಯ ಮೂರ್ತಿ. ಬೈರಾಗಿಯ ಮೂಲಿಕೆಯ ಸಹಾಯದಿಂದ ಗಂಡನಿಗೆ ಕಣ್ಣು ಬಂದದ್ದು ಶಾರದಮ್ಮನಿಗೆ "ಅದೃಷ್ಟವೋ ದುರಾದೃಷ್ಟವೋ ಹೇಳಲು ಸಾಧ್ಯವಿಲ್ಲ". ಎನ್ನುತ್ತಾರೆ ಕಥೆಗಾರರು ನ್ಯಾಯವಾಗಿ ನೋಡಿದರೆ ಇದು ಎರಡೂ ನಿಜ. ಅದು ಮೊದ-ಮೊದಲು ದುರಾದೃಷ ದಂತೆ ಕಂಡುಬಂದರೂ ಕ್ರಮೇಣ ಕಣ್ಣಿಗೆ ಕುರುಡು ಮುಸುಕಿ ಮನಸ್ಸಿಗೆ ಮುಸುಕಿದ್ದ ಮಾಯೆಯನ್ನು ತೆರೆಯಿತು.

ಒಂದು ಕುರುಡು ಇನ್ನೊಂದು ಕುರುಡನ್ನು ನಾಶಮಾಡಿದ ಈ ಕಥೆಯಲ್ಲಿ ಶಾರದಮ್ಮನ ಅನುಭವ ಬಹಳ ಗಾಢವಾಗಿ ಚಿತ್ರಿತವಾಗಿದೆ. ಅವಳು "ದೇವರೇ ಅವರಿಗೆ ಕಣ್ಣುಕೊಟ್ಟೆ, ಒಳ್ಳೆಯ ಬುದ್ಧಿಯನ್ನು ಕೊಡು" ಎಂದು ಪ್ರಾರ್ಥನೆ ಮಾಡುವದರಲ್ಲಿ ಅವಳ ಅಂತರಂಗದ ಕ್ಷೋಭೆ ವ್ಯಕ್ತವಾಗುತ್ತದೆ. ಕನಸ್ಸಿನಲ್ಲಿ ಅದೇ ಬೈರಾಗಿಯನ್ನು ಕಂಡರೆ ಆತನು ಇಲ್ಲದ ವಸ್ತುವಿಗೆ ಅತಿ ಆಸೆ ಪಟ್ಟರೆ ಒಂದು ಹೋಗಿ ಇನ್ನೊಂದು ಆಗುತ್ತದೆ ಎನ್ನುತ್ತಾನೆ. ಶಂಕರ ಹೆಣ್ಣನ್ನು ಒಪ್ಪಬೇಕಾದಾಗ ಶಾರದಮ್ಮನು ಯಾರ ಕಣ್ಣಿಗೆ ಹೇಗೆ ಕಂಡರೇನು ಶಂಕರಾ? ಮುಖ್ಯವಾಗಿ ಮನಸ್ಸೊಪ್ಪಬೇಕು ಎನ್ನುತ್ತಾಳೆ. ಇದರಲ್ಲಿ 'ಕಣ್ಣಿಗೆ' ಎನ್ನುವ ಪದದ ಮೇಲೆ ಅವಧಾರಣೆ ಇಟ್ಟು ಓದಿದರೆ ಕಥೆಯ ದೃಷ್ಟಿ ಗೋಚರವಾಗುತ್ತದೆ.

ಶಾರದೆಯ ಜೀವನಕ್ಕೆ ಸಂಕಟವನ್ನು ತಂದವನು ಶೀವರಾಮಯ್ಯ ಆದರೂ ಅವನನ್ನು ಆಕರ್ಷಿಸುವ ಭಾಗ್ಯಮ್ಮ-ಲಲಿತೆ ಇವರಿಬ್ಬರಿಗೂ ಅದರ ಭಾಗ ಸ್ವಲ್ಪ ಸಲ್ಲಬೇಕು. ವೇಶ್ಯೆಯಾದ ಭಾಗ್ಯಮ್ಮ ತನ್ನ ಬಲೆಯಲ್ಲಿ ಶಿವರಾಮಯ್ಯನನ್ನು ಹಾಕಿಕೊಂಡ ಸಂವಾದ ಚಿಕ್ಕದಾದರೂ ಭಾಗ್ಯಮ್ಮನ ಚಿತ್ರವನ್ನು ಸಂಪೂರ್ಣವಾಗಿ ಕೊಡುತ್ತದೆ. ಬಹಳ ಘಾಸಿಯಾದ ಅವಳು ಈ ವಿಚಾರದಲ್ಲಿ ಇನ್ನೂ ಕಲಿಯಬೇಕಾದ ಶಿವರಾಮಯ್ಯನಿಗೆ ಮೋಸ ಮಾಡುವುದು ಕಷ್ಟವಾಗಲಿಲ್ಲ. ಈ ಸಮಯದಲ್ಲಿಯೇ ಶಾರದಮ್ಮನು ಹೇಳಿದ ಒಳ್ಳೆಯ ಮಾತಿಗೆ ಕೋಪಗೊಂಡು ಶಿವರಾಮಯ್ಯನು

"ಕಣ್ಣು ಹೋದರೆ ಹೋಗಲೀ, ಕಣ್ಣು ಮತ್ತೆ ಹೋದರೆ ಮನೆಯಲ್ಲಿಯೇ ಕುಳಿತುಕೊಳ್ಳುತ್ತೇನೆ ಆಗ ನೀನು ಸುಖವಾಗಿರಬಹುದು" ಎಂದು ಕಠಿಣವಾಗಿ ನುಡಿಯುತ್ತಾನೆ. ಈ ಭವಿಷ್ಯವು ಸತ್ಯವಾಗಿಬಿಡುತ್ತದೆಂದು ಅವನಿಗೇನು ಗೊತ್ತು ಪಾಪ. ಶಾರದೆಗೆ ಅವನು ನಿಜವಾಗಿಯೂ ಮನೆಯಲ್ಲಿ ಕೂರುವುದು ಬೇಕಿಲ್ಲ. ಆದರೆ ಆದಾಗದೇ ಅವಳ ಸುಖ ಹಿಂದಿರುಗುವ ಆಗಿರಲಿಲ್ಲ. ಶಿವರಾಮಯ್ಯನ ಕತೆಯನ್ನು ಬೆಳೆಸುವ ಈ ಎರಡು ಸ್ತ್ರೀ ವ್ಯಕ್ತಿಗಳು ಈ ಕಥೆಯಲ್ಲಿ ಚೆನ್ನಾಗಿ ಮೂಡಿಬಂದಿದೆ.

ನೀಲಿಯ ಕವರಿನ ಕತೆಯ ಇಂದಿರೆ ಎಲ್ಲಾ ಮನೆಗಳ ನವದಾಂಪತ್ಯದ ಇಂದಿರೆಯೇ ಅವಳ ಚಿತ್ರಣದಲ್ಲಿ ಯಾವ ಹೊಸತನವೂ ಇಲ್ಲ. ಪತಿಪ್ರೇಮ, ಕೋಪ, ಕಣ್ಣೀರು ಒಳಗಾಗಿರುವ ಸಣ್ಣಚಿತ್ರ ಅವಳದು. ಕಥೆ ಕೇವಲ ಘಟನಾ ಪ್ರಧಾನವಾಗಿರುವುದರಿಂದ ಪಾತ್ರಚಿತ್ರಣಕ್ಕೆ ಇಲ್ಲಿ ಹೆಚ್ಚು ಅವಕಾಶವಿಲ್ಲ.

ನಿಷ್ಪ್ರಯೋಜಕ ಕಥೆಯಲ್ಲಿ ತಾಯಿ ಕಾವೇರಮ್ಮ, ತಂಗಿ ಸಾವಿತ್ರಿ ಇವರಿಬ್ಬರೂ ನಿರಾಧಾರರಾಗಿದ್ದಾಗ ಕಾರ್ಖಾನೆ ಸೇರಿ, ಅವರ ಜೀವನಕ್ಕೂ, ತಂಗಿಯ ಮದುವೆಗೂ ಸಹಾಯ ಮಾಡಿದ ಕಥೆಯಲ್ಲಿ ಈ ತಾಯಿ ಮಕ್ಕಳಿಬ್ಬರೂ ದೇಶದ ಸ್ವಾತಂತ್ರ್ಯ ಹೋರಾಟದಲ್ಲಿ ಬಲಿಯಾದ ಸೀನಪ್ಪನಿಗೆ ಕಣ್ಣೀರಿಡುವುದನ್ನು ಕಾಣುತ್ತೇವೆ. ಸೀನಪ್ಪನ ಪಾತ್ರಕ್ಕೆ ಇವರಿಬ್ಬರೂ ಹಿನ್ನಲೆಯಾಗಿ ಇಲ್ಲಿ ರೂಪುಗೊಂಡಿದ್ದಾರೆ. ಅವರ ಕಣ್ಣೀರಿನಲ್ಲಿ ಸೀನಪ್ಪನು 'ನಿಷ್ಪ್ರಯೋಜಕನಲ್ಲ' ಎಂಬುದು ಸ್ಥಾಪಿತವಾಗುತ್ತದೆ.

'ತಾಯಿ-ಮಗ' ಕಥೆ ಕನ್ನಡದಲ್ಲಿ ಅಪೂರ್ವ ಪ್ರಯೋಗವಾದ ಕಥೆಯಾಗಿದೆ. ಪಾಶ್ಚಾತ್ಯರಲ್ಲಿ ಕೆಲವು ನಾಟಕಗಳಲ್ಲಿಯೂ, ಕೆಲವು ಕಥೆಗಳಲ್ಲಿಯೂ ಹಿಂದೆಯೇ ಪ್ರಯೋಗಿಸಿರುವ ಒಂದು ಸನ್ನಿವೇಶವನ್ನು ಅಚ್ಚುಕಟ್ಟಾಗಿ ಈ ಕತೆಯಲ್ಲಿ ಕಥೆಗಾರರು ಉಪಯೋಗಿಸಿದ್ದಾರೆ. ಹೆತ್ತಮಗು ಎದುರಿಗಿದ್ದರೂ, ಕಾಲ ಕಳೆದಂತೆಲ್ಲೂ ಆ ಮಗನು ಬೆಳೆ-ಬೆಳೆದಂತೆ ಭಾವಿಸಿ ಕನಸಿನ ಮಗನನ್ನೆ ನಂಬಿ, ಭ್ರಮೆಯ ಲೋಕದಲ್ಲಿ ತೊಳಲಾಡಿ ಪ್ರತ್ಯಾಶೆಯಿಂದ ಚಿಂತೆಯಲ್ಲಿ ಕುಪಿತಳಾದ ಯಮುನಮ್ಮನ ಚಿತ್ರ ಇಲ್ಲಿ ಚೆನ್ನಾಗಿ ರೂಪುಗೊಂಡಿದೆ. ಯಮುನಮ್ಮನ ಕತೆಯಲ್ಲಿ ಅವಳ ಮದುವೆ, ವಿಧವೆಯಾದದು, ಭಂಡನಾದ ವೆಂಕಟ ಪತಿಯೊಡನೆ ಆಕೆಯ ಸಂಗ ಬೆಳೆದುದು, ಅದರ ಪರಿಣಾಮವಾಗಿ ಆಕೆ ಗರ್ಭಿಣಿಯಾಗಿದುದು, ಲೋಕಾಪವಾದವನ್ನು ತಪ್ಪಿಸಲು ಬೇರೆ ಊರಿಗೆ ಹೋಗಿ, ಆಕೆ ಹೆತ್ತ ಮಗುವನ್ನು ಬೇರೊಬ್ಬರಿಗೆ ಕೊಟ್ಟು ಆಕೆಗೆ ಸುಳ್ಳು ಹೇಳಿದುದು, ಅವಳಿಗೆ ಹುಚ್ಚು ಹಿಡಿದುದು, ಅವಳಿಗೆ ಹುಚ್ಚು ಹಿಡಿದಿದ್ದು, ಇವೆಲ್ಲ ಬಹು ಉಚಿತವಾಗಿ ಚಿತ್ರಿಸಲ್ಪಟ್ಟಿವೆ. ಈ ಕಥೆಯಲ್ಲಿ ಎಂ.ವಿ.ಸೀ.ಯವರ ಕಥನ ಕಲೆ ತುಂಬಾ ಪರಿಣಾಮಕಾರಿಯಾಗಿದೆ.

ರಾಮು ಮದುವೆಯಾಗಿ ಮಾವನ ಮನೆಗೆ ಹೋಗುವುದು ಅಲ್ಲಿ ಯಮುನಮ್ಮ ಇವನನ್ನು ತಬ್ಬಿಕೊಂಡು "ಬಂದೆಯಾ ಮಗನೇ" ಎಂದು ಉದ್ಗಾರ ತೆಗೆಯುವುದು, ರಾಮುವು "ನಾನೆಲ್ಲಿಯ

ಮಗ ನಿನಗೆ" ಎಂದು ಚೀರಿಕೊಳ್ಳುವುದು. ಅವಳು ಆ ಕ್ಷಣ ಮಾತಿನ ರೀತಿಯಲ್ಲಿ ವ್ಯತ್ಯಾಸ ಮಾಡಿ ಖಿನ್ನಮನಸ್ಸಿನವಳಾಗಿ ಕ್ಷಮಾಪಣೆ ಕೇಳುವುದು ಇವೆಲ್ಲ ಕತೆಗೆ ಬೇಕಾದ ಪೂರ್ವ ಸನ್ನಾಹವನ್ನು, ನಡುವೆ ಆಮೇಲೆ ಬರುವ ರಾಮುವಿನ ಯೋಚನೆ, ಯಾಕೆ ಯಮುನಮ್ಮನಿಗೆ ಹುಚ್ಚು ವಾಸಿಯಾಗುವಂತೆ ಮಾಡಬಾರದು ಎನ್ನುವ ಉತ್ಸಾಹ ಇವುಗಳ ಪರಿಣಾಮವಾಗಿ ರಾಮು ವೈದ್ಯರಿಗೆ ಸಾಧ್ಯವಾಗದಿದ್ದನ್ನು ಸಾಧ್ಯಮಾಡಲು ನಿಶ್ಚಯಿಸಿಬಿಡುತ್ತಾನೆ. ಇದಕ್ಕೆ ಮುಂಚೆ ರಾಮುವಿನ ಅಂತರಂಗದ ತಮುಲವನ್ನು ಮರುಕದ ನೂರು ಮೂಕ ವೇದನೆಗಳನ್ನು ಸಂಗ್ರಹವಾಗಿ ಚಿತ್ರಿಸಿರುವ ರೀತಿ ಚೆನ್ನಾಗಿದೆ.

ನಿಶ್ಚಯ ಮಾಡಿದ ಮೇಲೆ ಆ ಪ್ರಯೋಗದ ಪರಿಣಾಮ ರಾಮುವಿಗೆ ಸರಿಯಾಗಿಯೇ ಕಂಡರೂ ಇತರರಿಗೆಲ್ಲ ಏನೋ 'ತೊಳಸಂಬಟ್ಟೆ' ಯಾಯಿತೆಂದು ಕ್ರೋಧವುಂಟಾಗುತ್ತದೆ. ಇದರ ಚಿತ್ರಣವೂ ಚನ್ನಾಗಿಯೇ ಬಂದಿದೆ.

ಕಥೆಯ ಅಂತ್ಯವೂ ಅಂತೆಯೇ ಉಚಿತವಾಗಿದೆ. ಯಮುನಮ್ಮನನ್ನು ಇನ್ನೂ ಹೆಚ್ಚು ದಿನ ಬದುಕಿರುವಂತೆ ಚಿತ್ರಿಸುವುದು ಕತೆಗೆ ಜೀವನಕ್ಕೆ ಹಿಂಸಕಾರಿ ಅಲ್ಲದೆ ಅನೇಕ ದಿನಗಳು ಸುಮಾರು ೨೦ ವರ್ಷಗಳು ಈ ಕಷ್ಟದಲ್ಲಿ ನರಳಿದ ಯಮುನಮ್ಮನಿಗೆ ಶಾಂತಿ ಸಿಕ್ಕಿದ ಸಂದರ್ಭದಲ್ಲಿ ನಿಜವಾದ ಶಾಂತಿ ಒದಗಿ ಬಂದರೆ ಅದು ಆಶ್ಚರ್ಯವಲ್ಲ. ಕೊನೆಯಲ್ಲಿ ಸಾಯುವುದಕ್ಕೆ ಮುಂಚೆ ಮತ್ತೆ 'ರಾಮು ನಿಜವಾಗಿಯೂ ನನ್ನ ಮಗನೆ' ಎಂದುಕೊಳ್ಳುವ ಪ್ರಶ್ನೆಯಲ್ಲಿ ಯಮುನಮ್ಮನ ಜೀವಿತದ ಪ್ರತ್ಯಾಶೆಯಲ್ಲ ಮನಗೊಂಡು ಮಾತು ಹೊರಹೊಮ್ಮಿದೆ. ಅವಳ ವಾಸ್ತವ ಚಿತ್ರಕ್ಕೆ ಈ ವಾಕ್ಯವೇ ನಿಜವಾದ ಕೊನೆಯ ಮಾತು.

ತಾಯಿ-ಮಗ ಕಥೆಯ ವಸ್ತು ತುಂಬಾ ಪರಿಣಾಮಕಾರಿಯಾಗಿದೆ. ಅವರು ಈ ಕಥೆಯಲ್ಲಿ ತಾಯಿ ತನ್ನ ಮಗುವನ್ನು ಕಳೆದುಕೊಂಡು ಹೋಗುವುದು ನಂತರ ಒಬ್ಬ ಹುಡುಗನನ್ನು ಕಂಡು ಇವನೇ ನನ್ನ ಮಗನೆಂದು ಚಡಪಡಿಸುವಂತದ್ದು. ಮಗನನ್ನು ನೋಡಿದ ಮೇಲೆ ಯಮುನಮ್ಮನಿಗೆ ಹುಚ್ಚು ವಾಸಿಯಾಗುವುದು ಹೀಗೆ ಅನೇಕ ಪ್ರಸಂಗಗಳು ತುಂಬಾ ಚೆನ್ನಾಗಿ ನಿರೂಪಿತವಾಗಿದೆ. ಈ ಕಥೆ ತಾಯಿಯೊಬ್ಬಳ ಸಹಜ ಬಯಕೆ ಹೇಗಿರುತ್ತದೆ ಎಂಬುದನ್ನು ಅವಳ ನೋವು ಸಂಕಟಗಳು ತಿಳಿಸುತ್ತವೆ.

ಹೆತ್ತವರ ಪುಣ್ಯದಲ್ಲಿ ಕಾಣಿಸಿಕೊಳ್ಳುವ ಸ್ತ್ರೀ ಪಾತ್ರ ವಸ್ತುವಿನ ದೃಷ್ಟಿಯಿಂದ ಮಹತ್ವದ್ದು. ಇಲ್ಲಿ ಆಫೀಸಿನ ಜವಾನನಾಗಿ ಕೆಲಸ ಮಾಡುತ್ತಿದ್ದ ಮಾದಯ್ಯ ತನ್ನ ಮಗನನ್ನು ಓದಿಸುವುದಕ್ಕೆ ತುಂಬಾ ಕಷ್ಟ ಪಡುತ್ತಿರುತ್ತಾನೆ. ಮಗ ಪರೀಕ್ಷೆಗೆ ಫೀಜು ಕಟ್ಟಬೇಕು, ತಂದೆಯ ಕೈಯಲ್ಲಿ ಕಾಸಿಲ್ಲ. ಇರುವ ಮಾರ್ಗ ಒಂದೇ ಹೆಂಡತಿಯ ಓಲೆ ಮಾರಬೇಕು. ಅವಳನ್ನು ಓಲೆ ಕೇಳಿದರೆ ಗಂಡ ಜೂಜಾಡುತ್ತಾನೋ, ಹಾದರ ಮಾಡುತ್ತಾನೋ ಎಂದು ಅನುಮಾನ ಬಂದಿತು ಎಂದು ತನ್ನ ಕಛೇರಿಯ ಶ್ರೀಕಂಠಯ್ಯನವರನ್ನು ಕರೆದುಕೊಂಡು ಹೋಗುತ್ತಾನೆ. ಶ್ರೀಕಂಠಯ್ಯ ಅವನ ಹೆಂಡತಿಗೆ

ತಿಳಿಸುತ್ತಲೆ "ನನ್ನ ಗಂಡನಿಗೆ ವಸಿ ಬುದ್ಧಿ ಹೇಳಿ ನನ್ನೊಡೆಯ ಈಟೊಂದು ಅಪನಂಬಿಕೆ ಆದರೆ ಹ್ಯಾಗೆ ಅವನೇ ಕೇಳಿದ್ದರೆ ನಾನು ಕೊಡ್ತಾ ಇರಲಿಲ್ವಾ? ಓಲೆ ಅಲ್ಲ ಕಿವಿ ಕೊಯ್ದು ಕೊಡು ಅಂದಿದ್ದರೂ ಕೊಡ್ತಾ ಇದ್ದಿದ್ದೆ. ನಮಗೋಸ್ಕರ ಅವರು ಜೀವ ತೇಯ್ತಾ‌ಇಲ್ವಾ?" ಎನ್ನುತ್ತಾಳೆ. ಶ್ರೀಕಂಠಯ್ಯನವರು "ಯಾವ ಜಾತಿಯವರಲ್ಲೇ ಆಗಲಿ ಎಷ್ಟು ಜನ ಹೆಂಡಿರು ಈ ಮಾತು ಹೇಳುವರು ಎಂದು ಆಶ್ಚರ್ಯವಾಯಿತು. ಆದ್ದರಿಂದ ಹೆತ್ತವರ ಪುಣ್ಯ ಕಥೆಯು ವಸ್ತುವಿನ ದೃಷ್ಟಿಯಿಂದ ಒಂದು ಅರ್ಥಪೂರ್ಣವಾದ ಕಥೆಯಾಗಿದೆ.

**ಸುಂದರ ಪರಿವರ್ತನೆ :**

ಇದು ಒಂದು ಉತ್ತಮ ಕಥೆ ಇಲ್ಲಿ ಸುಂದರವಾಗಿ ಪರಿವರ್ತನೆಗೊಂಡ ಪಾತ್ರವು ಇಲ್ಲಿ ಸುಸ್ಪಷ್ಟವಾಗಿ ಮೂಡಿದೆ. ಅವಳ ಹದಿನೆಂಟು ವರ್ಷಗಳ ಜೀವನದ ಚಿತ್ರಣದಲ್ಲಿ ಅನೇಕ ಘಟನೆಗಳು ನಡೆದು ಹೋಗುತ್ತವೆ. ವಿಧವೆಯಾದ ಅವಳು 'ಮಡಿ'ಯಾದದ್ದು ನಾರಾಯಣ ರಾಯರ ಸಂಸಾರದಲ್ಲಿ ಅಣ್ಣನ ಸಂಸಾರದಲ್ಲಿ ಕೆಲಸ ಮಾಡುವವಳಾಗಿದ್ದುದು ಸ್ಕೂಲ್ ಮಿಸ್ಟೇಸ್ ಜೊತೆಯಲ್ಲಿ ಅನೇಕ ರಾತ್ರಿಗಳನ್ನು ಕಳೆದದ್ದು, ಅಲ್ಲಿಯೇ ಒಬ್ಬ ಸಾಹುಕಾರನ ಸಂಪರ್ಕವನ್ನು ಸಂಪಾದನೆ ಮಾಡಿದ್ದು, ತಲೆ ಕೂದಲು ಬೆಳೆಸಿದ್ದು, ಸರಳೆಯನ್ನು ಎತ್ತು ಅವಳನ್ನು ದೊಡ್ಡವಳನ್ನಾಗಿ ಮಾಡಿದ್ದು ಇವೆಲ್ಲಾ ಈ ಕಥೆಯ ಬೇರೆ ಬೇರೆ ಮೆಟ್ಟಿಲುಗಳು. ಲಕ್ಷ್ಮಮ್ಮನ ಕೂದಲು ಬೆಳೆದಂತೆಲ್ಲಾ ಈ ಚಿತ್ರವೂ ಬೆಳೆಯುತ್ತಾ ಹೋಗುತ್ತದೆ. ಇದರ ಪ್ರಾರಂಭವಾದ ಕಥೆಗಾರನ "ಹೀಗಿದಿದ್ದರೆ"? ಎನ್ನುವ ಚಿತ್ರ ಆದ್ದರಿಂದ ಅವಳು ಅನುಭವಿಸಿದ ಮೂಕಯಾತನೆ ಇವುಗಳು ನಮ್ಮನ್ನು ಅವಳ ವಿಚಾರದಲ್ಲಿ ಅನುಕಂಪಿಸುವಂತೆ ಮಾಡುತ್ತವೆ. ಸರಳೆ ಲಕ್ಷ್ಮಮ್ಮನ ಹಿಂದಿನ ಚಿತ್ರದಂತಿದ್ದಳೆನ್ನುವ ಮಾತಿನಲ್ಲಿ ಇವರಿಬ್ಬರ ಸೌಂದರ್ಯವೂ ಸೂಚಿತವಾಗಿದೆ. ವಿಧವೆಯರ ಜೀವನದಲ್ಲಿ ಅನುಕಂಪ ಸೂಚಿಸುವ ಈ ಚಿತ್ರದಲ್ಲಿ ಮತ್ತಾವ ವೈಶಿಷ್ಟ್ಯವಿಲ್ಲ.

**ಮೇದರ ಚನ್ನಿ :**

ಈ ಕತೆ ತೊಟ್ಟಿಲು ಮಾರುವ ಹೆಣ್ಣೊಂದು ಮನೆಯೊಂದರ ಯಜಮಾನನ್ನು ಕೇಳುವ 'ತೊಟ್ಲು ಬೇಕೆ ಸ್ವಾಮಿ, ತೊಟ್ಲು? ಎಂಬ ಪ್ರಶ್ನೆಯಿಂದ ಪ್ರಾರಂಭವಾಗುತ್ತದೆ. ಪರಸ್ಪರ ಅನ್ಯೂನ್ಯರಾಗಿರುವ ದಂಪತಿಗಳ ಮನೆಯವರು ತೊಟ್ಟಿಲು ಮಾರಲು ಬಂದ ಸುಂದರ ಹೆಣ್ಣು ತನಗಿಂತ ವಯಸ್ಸಾದ ಮಕ್ಕಳನ್ನು ಕೊಡಲಾರದ ಗಂಡಿನ ಕೈ ಹಿಡಿದಳು. ಗಂಡನೇ ಮಕ್ಕಳು ಬೇಕೆಂದು ಹಂಬಲಿಸಿದಾಗ ಹಿಂದೆ ತನ್ನನ್ನು ಬಯಸಿ ತನ್ನನ್ನು ಅರ್ಪಿಸಿಕೊಂಡು ಬಸಿರಾಗಿದ್ದಾಳೆ. ಗಂಡನಿಗೆ ಸಂಭ್ರಮ. 'ಯಾರಿಗಾದರೂ ತೊಟ್ಟಿಲು ಕೊಟ್ಟು ಅವರ ಮಗು ಬೆಳೆದ ಮೇಲೆ ತೊಟ್ಲನ್ನು ತೆಗೆದುಕೊಂಡು ಬಾ, ಅದರಲ್ಲಿ ನಮ್ಮ ಮಗು ಬೆಳೆಯಲಿ' ಎನ್ನುತ್ತಾನೆ. ಹೀಗೆ ಮಾಡಿದರೆ ಮಗುವಿಗೆ ಶ್ರೇಯಸ್ಸು ಎಂದು ಅವನ ನಂಬಿಕೆ. ಅವಳು ತೊಟ್ಟಿಲನ್ನು ಹಣ ತೆಗೆದುಕೊಳ್ಳದೆ ಕೊಡಲು ಬಯಸುತ್ತಾಳೆ. ತೆಗೆದುಕೊಳ್ಳುವವರು ಒಪ್ಪದಿದ್ದಾಗ ಒಂದು ರೂಪಾಯಿಗೆ ಮಾರುತ್ತಾಳೆ.

ಅವಳು ಮಗುವನ್ನು ಹಡೆಯುತ್ತಾಳೆ. ಮಗು ಚೆನ್ನಾಗಿ ಬೆಳೆಯುತ್ತದೆ. ಆದರೆ ಗಂಡನಿಗೆ ಮೋಸ ಮಾಡಿದೆ ಎಂಬ ಕೊರಗು ಅವಳಿಗಿರುತ್ತದೆ. ಒಂದು ದಿನ ಮಗುವನ್ನು ತನ್ನ ಗಂಡನ ಪಕ್ಕದಲ್ಲಿ ಮಲಗಿಸಿ ಮಾಯವಾಗುತ್ತಾಳೆ. ಇಲ್ಲಿ ಕಥೆಯ ಸಮಸ್ಯೆಗೆ ಒಂದು ರೀತಿಯ ಸಾಮಾಜಿಕ ವ್ಯವಸ್ಥೆಗೆ ಸಂಬಂಧ ಕಲ್ಪಿಸಬಹುದಾದರೂ ಮುಖ್ಯವಾಗಿ ಅದು ವ್ಯಕ್ತಿಗತವಾದ ಸಮಸ್ಯೆ ಅಂತಃಕರಣದ ಮತ್ತು ಮಾನವ ಸಂಬಂಧಗಳಲ್ಲಿ ನಿಷ್ಠೆಯ ಸಮಸ್ಯೆ, ಚೆನ್ನಾಗಿಯೇ ಕಾರ್ಯಪ್ರವೃತ್ತಳಾಗಿ ಎರಡು ಬಾರಿಯೂ ತನ್ನ ಸಮಸ್ಯೆಗಳನ್ನು ಬಿಡಿಸಿಕೊಳ್ಳುತ್ತಾಳೆ. ಅವಳ ಸನ್ನಿವೇಶ ಅವಳ ಸ್ವಭಾವ, ಇವುಗಳನ್ನು ಗಮನಿಸಿದಾಗ ಎರಡು ಬಾರಿಯೂ ಅವಳು ಆರಿಸುವ ಪರಿಹಾರ ಅನಿವಾರ್ಯ ಎಂದೆನಿಸುತ್ತದೆ. ಕಥೆ ಹಾಸ್ಯದಿಂದ ಪ್ರಾರಂಭವಾಗಿ ಹಗುರವಾದ ದನಿಯಲ್ಲಿ ಮುಂದುವರೆದು ಕ್ರಮೇಣ ಗಂಭೀರವಾಗುತ್ತದೆ. ಮಾಸ್ತಿಯವರ 'ಕೃಷ್ಣಮೂರ್ತಿಯ ಹೆಂಡತಿ' ಎಂಬ ಕಥೆಯಲ್ಲಿಯಂತೆ ಇಲ್ಲಿಯೂ ಕಥೆಯ ಜಾಡನ್ನು ನಿರ್ಮಿಸುವ ಉಲ್ಲಾಸ, ಅವರ ಒಳ್ಳೆಯತನ ನಮಗೆ ಪ್ರಪಂಚದಲ್ಲಿ ವಿವರಣೆಗೆ ಸಿಲುಕದ ಕಷ್ಟವಿರುವಂತಯೇ ವಿವರಣೆಗೆ ಸಿಲುಕದ ಸುಖವಿದೆ ಎಂಬುದನ್ನು ನೆನಪುಮಾಡಿಕೊಟ್ಟು ಒಂದು ಬಗೆಯ ಸಮತೋಲನವನ್ನು ಸಾಧಿಸಿದೆ.

ಎಂ.ವಿ.ಸೀ. ರವರ ಕಥೆಗಳಲ್ಲಿ ಕಂಡುಬರುವ ಸ್ತ್ರೀಯರ ಚಿತ್ರಣದ ವಸ್ತು ತುಂಬಾ ಸೊಗಸಾಗಿದೆ. ಇಲ್ಲಿ ಕಂಡುಬರುವ ಎಲ್ಲಾ ಸ್ತ್ರೀ ಪಾತ್ರಗಳು ಒಂದೊಂದು ದೃಷ್ಟಿಯಿಂದ ನೋಡಿದಾಗ ವಿಭಿನ್ನ ರೀತಿಯಲ್ಲಿ ಕಾಣುತ್ತಾರೆ. ಅವರ ಕಥೆಗಳಲ್ಲಿ ಕಂಡುಬರುವ ಸ್ತ್ರೀಯರ ನೈತಿಕ ಚೌಕಟ್ಟಿಗೆ ಬೆಲೆ ಕೊಡುವ ಕಥೆಗಳು ಇವೆ. ಅಲ್ಲದೇ ಅಂದಿನ ಸಮಾಜಿನ ಚೌಕಟ್ಟನ್ನು ಮೀರಿದ ಪಾತ್ರಗಳು ಇವೆ. ಅಂತಹ ಕಥೆ ಎಂದರೆ ಸುಂದರ ಪರಿವರ್ತನೆಯಲ್ಲಿ ಬರುವ ಲಕ್ಷ್ಮಮ್ಮನೂ ಸಹ ವ್ಯವಸ್ಥೆಯ ವಿರುದ್ಧವಾಗಿ ತನ್ನ ಎರಡನೇ ಮದುವೆಯಾಗಿ ತನ್ನ ಬಾಳಿಗೆ ಮಾರ್ಗವನ್ನು ಕಂಡುಕೊಂಡಳು. ಇನ್ನು ಕೆಲವು ಕಥೆಗಳಲ್ಲಿ ಕಂಡುಬರುವ ಸ್ತ್ರೀಯರು ಸಾಮಾಜಿಕ ವ್ಯವಸ್ಥೆಯಲ್ಲಿ ನೈತಿಕ ಚೌಕಟ್ಟನ್ನು ಮೀರಿ ಪರಪುರುಷರ ಸಂಪರ್ಕದಿಂದ ಮಕ್ಕಳನ್ನು ಪಡೆಯುವುದು ಮತ್ತು ಅದರ ನೆನಪು ಬಂದಾಗ ನಾನು ನನ್ನ ಗಂಡನಿಗೆ ಮೋಸಮಾಡುತ್ತಿದ್ದೇನೆ ಎಂದು ದುಃಖಿಸುವುದು ಕಂಡುಬರುತ್ತದೆ. ಇಂತಹ ಸಂದರ್ಭದಲ್ಲಿ ಕೆಲವು ಕಥೆಗಳು ಸುಖಾಂತದಲ್ಲಿ ಕೊನೆಗೊಂಡರೆ ಇನ್ನೂ ಕೆಲವು ಕಥೆಗಳು ಸಾವಿನಲ್ಲಿ ಕೊನೆಗೊಳ್ಳುತ್ತವೆ.

ಇನ್ನೂ ಕೆಲವು ಕಥೆಗಳಲ್ಲಿ ಕಂಡುಬರುವ ಸ್ತ್ರೀಯರ ಚಿತ್ರಣ ಆದರ್ಶ ಸಮಾಜಕ್ಕೆ ಹಿಡಿದ ಕನ್ನಡಿಯಂತೆ ಅವರ ಜೀವನ ಶೈಲಿ ಕಂಡುಬರುತ್ತದೆ. ಅವರೆಂದರೆ ಹಾಲಿನ ಹನುಮಕ್ಕ, ಕಡಲೇ ಪುರಿಯ ಕೆಂಪಮ್ಮ, ಕೊಟ್ಟಣದ ನೀಲಮ್ಮ ಈ ಪಾತ್ರಗಳು ಸಮಾಜದಲ್ಲಿ ಆದರ್ಶ ಸ್ತ್ರೀಯರಾಗಿ ಕಂಡುಬರುತ್ತಾರೆ. ಇವರು ಸಾಮಾಜಿಕ ವ್ಯವಸ್ಥೆಯಲ್ಲಿ ಅಪಪ್ರಚಾರ ಮಾಡುವವರ ವಿರುದ್ಧವಾಗಿ ಆದರ್ಶ ಸ್ತ್ರೀಯಾರಾಗಿ ಗುರುತಿಸಿಕೊಳ್ಳುತ್ತಾರೆ.

ಅಂದಿನ ಸಮಾಜದಲ್ಲಿ ವಾಸಿಸುತ್ತಿದ್ದ ಮಧ್ಯಮ ವರ್ಗ, ಕೆಳಜಾತಿಯ ಕುಟುಂಬದವರು, ಬಡವರು ಅನುಭವಿಸುತ್ತಿದ್ದ ಯಾತನೆ, ಕಷ್ಟಗಳನ್ನು ಅವರ ಬದುಕನ್ನು ಮನಮಿಡಿಯುವಂತೆ ಎಂ.ವಿ.ಸೀ. ಯವರು ಚಿತ್ರಿಸಿದ್ದಾರೆ. ಹೆತ್ತವರ ಪುಣ್ಯದಲ್ಲಿ ಬರುವ ಮಲ್ಲಮ್ಮ ಕಡುಬಡವಳಾದರೂ ತನ್ನ ಸಂಸಾರಕ್ಕಾಗಿ ಆಕೆಯ ತ್ಯಾಗ ಮನೋಭಾವನೆ, ಅವಳು ಆಡುವ ಮಾತುಗಳು ಅರ್ಥವತ್ತಾಗಿದೆ.

ಕೆಲವು ಸಣ್ಣಕತೆಗಳಲ್ಲಿ ಸ್ತ್ರೀಯರ ಚಿತ್ರಣವನ್ನು ತಮಾಷೆಗಾಗಿ, ಓದುಗರನ್ನು ಸಂತೋಷಪಡಿಸುವುದಕ್ಕಾಗಿ ರಚಿಸಿದಂತಿವೆ. ಈ ಕಥೆಗಳ ಜೀವಾಳ ಹಾಸ್ಯದ ನಗೆಯನ್ನು ಬೀರುವಂತದ್ದು. ಅಂತಹ ಕಥೆಯೆಂದರೆ 'ಹಸ್ತ ಪರಿಗ್ರಹಣ ತುಂಬಾ ಸ್ವಾರಸ್ಯಕರವಾಗಿವೆ. ಇಲ್ಲಿ ಚಲನಚಿತ್ರ ನೋಡಲು ಹೋಗಿ ಪಕ್ಕದಲ್ಲಿ ಕುಳಿತಿರುವುದು ಸುಂದರಿ ಎಂದು ತಿಳಿದು ತನ್ನ ಭಾವಮೈದನ ಕೈಯನ್ನು ಹಿಡಿದುಕೊಂಡಿರುವುದು ತುಂಬಾ ಸೊಗಸಾಗಿದೆ. 'ಹಾದಿಯ ಚೆಲುವೆ' ಇದು ಸಹ ಇಂತಹದೇ ಕಥೆಯಾಗಿ ಗೆಳೆಯರು ಜೊತೆಯಲ್ಲಿ ಹೋಗುವಾಗ ಒಂದು ಹೆಣ್ಣಿನ ಅಂಗ ಸೌಷ್ಟವವನ್ನು ಕುರಿತು ವರ್ಣಿಸುವುದು ತುಂಬಾ ಸೊಗಸಾಗಿದೆ. ಕೊನೆಗೆ ಕೇಳುತ್ತಿದ್ದವನ ಹೆಂಡತಿಯೇ ಅವಳು ಎಂದು ತಿಳಿದ ತಕ್ಷಣ ಕಥೆ ಹೇಳುತ್ತಿದ್ದವನು ಮಾಯವಾಗುತ್ತಾನೆ.

ಎಂ.ವಿ.ಸೀ.ರವರ ಕಥೆಗಳಲ್ಲಿ ಸ್ತ್ರೀಯರ ಬಗೆಗಿನ ನಾನಾ ರೀತಿಯ ಚಿತ್ರಣವನ್ನು ಕಾಣುತ್ತೇವೆ. ಸ್ತ್ರೀ ಪಾತ್ರಗಳಲ್ಲಿ ಸಾಕಷ್ಟು ವೈವಿಧ್ಯವಿದೆ ಎಂದು ಅವಳ ಚಿತ್ರಣದಲ್ಲಿ ಕಥೆಗಾರರ ಕೌಶಲ ವ್ಯಕ್ತವಾಗುತ್ತದೆಂದು ಮತ್ತೆ ಹೇಳಬೇಕಾಗಿಲ್ಲ.

**ಬಡತನ :**

ಎಂ.ವಿ.ಸೀ. ರವರ ಬಹುಪಾಲು ಸಣ್ಣಕತೆಗಳು ಸಮಾಜವನ್ನು ಕೇಂದ್ರವಾಗಿಟ್ಟುಕೊಂಡು ರಚನೆಯಾದವು. ಅವು ಸಮಾಜದಿಂದಲೇ ಆರಿಸಿಕೊಂಡಂತಹವುಗಳಾಗಿವೆ. ಅವರೇ ಹೇಳಿದಂತೆ ನಾವು ವಾಸಿಸುತ್ತಿದ್ದ ಮೈಸೂರಿನ ಹಳೆಯ ಅಗ್ರಹಾರದ ಹಾರುವರ ಕೇರಿಯ ನಿವಾಸಿಗಳೆಲ್ಲ ಕಡುಬಡವರೇ 'ನನ್ನ ಜೀವನ ನಾಟಕದ' ಪಾತ್ರವರ್ಗ ಎಂದು ಆಸ್ವಾದ ಗ್ರಂಥದಲ್ಲಿ ಹೇಳಿಕೊಂಡಿದ್ದಾರೆ.

ಅವರ ಕೆಲವು ಕಥೆಗಳು ಕಡುಬಡತನವನ್ನು ಚಿತ್ರಿಸುತ್ತವೆ. ಅಂತಹ ಕಥೆಯಲ್ಲಿ ಹಸಿವಿನ ಜೊತೆಗೆ ಬಡತನವನ್ನು ಚಿತ್ರಿಸುವಂತ ಕಥೆ 'ಪೆಪ್ಪರಮೆಂಟು' ಈ ಕಥೆಯ ಹೆಸರು ಮೇಲ್ನೋಟಕ್ಕೆ ಇದೆ. ಆದರೆ ಒಬ್ಬ ಸಾಮಾನ್ಯ ಮನುಷ್ಯ ತನ್ನ ಹಸಿವನ್ನು ನಿವಾರಿಸಿಕೊಳ್ಳಲು ಅವನು ಮಾಡುವ ಪ್ರಯತ್ನಗಳನ್ನು ಈ ಕಥೆ ನಿರೂಪಿಸುತ್ತದೆ.

ಕಥೆಯ ನಾಯಕ ಕುಳ್ಳಯ್ಯ ತನ್ನ ಮಕ್ಕಳ ಮತ್ತು ಹೆಂಡತಿಯ ಹಾಗೂ ಕುಳ್ಳಯ್ಯನ ಹಸಿವಿನ ಚಿತ್ರಣವಿದೆ. ನಂತರ ಕುಳ್ಳಯ್ಯನ ಹೆಂಡತಿ ಹಸಿವನ್ನು ತಾಳಲಾರದೇ ತನ್ನ ಗಂಡನಿಗೆ ಈ ರೀತಿ ಹೇಳುತ್ತಾಳೆ. "ಯಾರದಾದರೂ ಮನೆಗೆ ಕನ್ನಹಾಕಿ, ಯಾವುದಾದರೂ ಅಂಗಡಿನ ಲೂಟಿ ಮಾಡಿ. . ." ಆಗ ಕುಳ್ಳಯ್ಯ ನನ್ನ ಹೆಂಡತಿ ಹಿಂಗೆ ಹೇಳಿದ್ಲು ಅಂತ ನಾನು ಆ ಕೆಲಸ ಮಾಡಬ್ಯೆದ. ಪರರ ಒಡವೆ ಕೊಂಡರೆ ಶಿವ ಮೆಚ್ಚಾನಾ?. . . ಅಂದ್ರೆ, ಶಿವಂಗೆ ಏನು ಬಂದೈತೆ? ನಮ್ಮ ಹಸಿವು ತಿಳಿಯೋಕಿಲ್ಲವಲ್ಲ? ಕೊಟ್ಟೋರಿಗೆ ಕೊಡ್ತಾ ಇರ್‍ತಾನೆ, ಇಲ್ಲದೋರಿಗೆ ಇಲ್ಲವೇ ಇಲ್ಲಾ.

ಹೀಗೆ ಕಥೆ ಹಸಿವಿನಿಂದ ಆರಂಭವಾಗಿ ಕಥೆಯುದ್ದಕ್ಕೂ ಹಸಿವು, ಬಡತನ, ಇವೆರಡೂ ಕುಳ್ಳಯ್ಯನನ್ನು ಆಲೋಚನೆಗೆ ಒಳಗುಮಾಡುತ್ತವೆ. ಒಬ್ಬ ಸುಸಂಸ್ಕೃತನಾದ ಕುಳ್ಳಯ್ಯ ಯಾವ

ಕೆಟ್ಟ ಕೆಲಸ ಮಾಡಲು ಅವನ ಮನಸ್ಸು ಒಪ್ಪುವುದಿಲ್ಲ. ಆದರೆ ಬಸವಣ್ಣನವರ ವಚನ ಅವನಿಗೆ ನೆನಪಿಗೆ ಬರುತ್ತದೆ. 'ಕಳಬೇಡ, ಕೊಲಬೇಡ, ಹುಸಿಯ ನುಡಿಯಲೂ ಬೇಡ. ಅನ್ಯರಿಗೆ ಅಸಹ್ಯ ಬೇಡ' ಬಸವಣ್ಣನವರ ವಚನ ಅವನಿಗೆ ನೆನಪಿಗೆ ಬಂದು ಅವನ ಮನಸ್ಸು ಭಿಕ್ಷೆಯನ್ನು ಬೇಡುವುದಕ್ಕೂ ಒಪ್ಪದೇ ಕೊನೆಗೆ ತನ್ನ ಮನೆಯವರೆಲ್ಲಾ ಹಸಿದಿರುವುದು ನೆನಪಿಗೆ ಬಂದು ಅವನು ಭಿಕ್ಷೆ ಬೇಡುತ್ತಾನೆ. ಯಾರೂ ಅವನಿಗೆ ಭಿಕ್ಷೆಯನ್ನು ಹಾಕುವುದಿಲ್ಲ. ಅನೇಕರು ಕುಳ್ಳಯ್ಯನನ್ನು ಬಾಯಿಗೆ ಬಂದತೆ ಬೈಯುತ್ತಾರೆ. ಯಾರೋ ಮೂರ್ಖಾಸನ್ನು ಭಿಕ್ಷೆ ಕೊಡ್ತಾರೆ. ಅವನು ಆ ಮೂರ್ಖಾಸಿನಿಂದ ಮಕ್ಕಳಿಗೆ ಮೂರು ಪೆಪ್ಪರಮೆಂಟು ತೆಗೆದುಕೊಳ್ಳುತ್ತಾನೆ. ನಂತರ ಅವನ ಮನಸ್ಸು ಹಸಿವಿಗಾಗಿ ಕಳ್ಳತನ ಮಾಡಿದರೆ ತಪ್ಪಲ್ಲವೆಂದು ತಿಳಿದು ಶ್ರೀನಿವಾಸರಾಯರ ಮನೆಯಲ್ಲಿ ಕಳ್ಳತನ ಮಾಡಲು ಹೋಗಿ ಅವರ ಮನೆಯ ಆಳಿನ ಕೈಗೆ ಸಿಕ್ಕುತ್ತಾನೆ. ಅಲ್ಲಿದ್ದವರು ಎಲ್ಲರೂ ಅವನನ್ನು ಹೊಡೆಯುತ್ತಾರೆ. ಆದರೆ ಕರುಣಾಮಯಿ ಶ್ರೀನಿವಾಸರಾಯರು ಅವನನ್ನು ವಿಚಾರಿಸಿದಾಗ ಮಾಡಿದ ಅಪರಾಧವನ್ನು ಒಪ್ಪಿಕೊಳ್ಳುತ್ತಾನೆ. ಅವನು 'ಹಸಿವಿಗಾಗಿ ಅಕ್ಕಿಯನ್ನು' ಬಿಟ್ಟರೆ ಇನ್ನೇನನ್ನು ಕದ್ದಿರುವಿದಿಲ್ಲ. ಕೊನೆಗೆ ಶ್ರೀನಿವಾಸರಾಯರು ಅವನ ಹಸಿವಿನ, ಬಡತನದ ಕಥೆಯನ್ನು ಕೇಳಿ ಅವನನ್ನು ಪೊಲೀಸರಿಗೆ ಒಪ್ಪಿಸದೇ ಬಿಟ್ಟುಬಿಡುತ್ತಾರೆ.

ಆದರೆ ಕುಳ್ಳಯ್ಯ ಮನೆಗೆ ಬಂದಾಗ ಅವನ ಹೆಂಡತಿ ಮಕ್ಕಳು ಹಸಿವನ್ನು ತಾಳಲಾರದೆ ಹೆಂಡತಿ ನೇಣಿಗೆ ಶರಳಾಗಿದ್ದಳು. ಮಕ್ಕಳು ಹಸಿವಿನಿಂದ ಸತ್ತಿದ್ದರು. ಇಂತಹ ದೃಶ್ಯವನ್ನು ನೋಡಿದ ಕುಳ್ಳಯ್ಯ ಮನನೊಂದು ತಾನು ನೇಣಿಗೆ ಶರಣಾಗುವಂತದ್ದು. ಈ ಕತೆಯಲ್ಲಿ ಬಡತನ ಮತ್ತು ಹಸಿವು ಒಬ್ಬ ಸುಸಂಕೃತ ವ್ಯಕ್ತಿಯನ್ನು ಯಾವ ರೀತಿ ಕಳ್ಳತನಕ್ಕೆ ಪ್ರೇರೇಪಣೆ ನೀಡುತ್ತದೆ ಎಂಬುದನ್ನು ಲೇಖಕರು ಸೊಗಸಾಗಿ ಚಿತ್ರಿಸಿದ್ದಾರೆ.

ಎಂ.ವಿ.ಸೀರವರ ಅನೇಕ ಸಣ್ಣಕತೆಗಳಲ್ಲಿ ಮಧ್ಯಮವರ್ಗದ ಜನರ ಬಡತನ, ನಿರುದ್ಯೋಗ, ಹಸಿವು, ಅನಕ್ಷರತೆ ಮುಂತಾದ ಅಂಶಗಳು ಕಂಡುಬರುತ್ತವೆ. ಅವರು ಬಡತನವನ್ನು ಚಿತ್ರಿಸುವ ಅನೇಕ ಕಥೆಗಳನ್ನು ಬರೆದಿದ್ದಾರೆ. ಅವೆಂದರೆ ಕಡಲೆಪುರಿಯ ಕೆಂಪಮ್ಮ, ಹಾಲಿನ ಹನುಮಕ್ಕ, ಹೆತ್ತವರ ಪುಣ್ಯ, ಕೊಟ್ಟಣದ ನೀಲಮ್ಮ ಮುಂತಾದವು. ಈ ಕಥೆಗಳಲ್ಲಿ ಕಾಣುವ ಪಾತ್ರಗಳು ಇಂದಿಗೂ ಸಹ ನಮ್ಮ ನಡುವೆ ಜೀವಂತಿಕೆಯನ್ನು ಉಳಿಸಿಕೊಂಡಿರುವಂತೆ ಕಾಣುತ್ತವೆ. ಅಂತಹ ಪಾತ್ರಗಳೆಂದರೆ ಕೆಂಪಮ್ಮ, ಮಲ್ಲಮ್ಮ,ಕುಳ್ಳಯ್ಯ, ಹನುಮಕ್ಕ, ನೀಲಮ್ಮ ಇವರು ಆದರ್ಶ ಬದುಕನ್ನು ಕಂಡವರು.

ಈ ಮೇಲಿನ ಎಲ್ಲಾ ಪಾತ್ರಗಳು ಸಹ ಬಡತನದ ಎಳೆ-ಎಳೆಯನ್ನು ಓದುಗರಿಗೆ ಬಿಚ್ಚಿಡುತ್ತವೆ. ಪೆಪ್ಪರಮೆಂಟು ಕಥೆಯಲ್ಲಿ ಕಾಣುವ ಕುಳ್ಳಯ್ಯ ನಿರುದ್ಯೋಗಿ, ಹಸಿವಿಗಾಗಿ ಕುಳ್ಳಯ್ಯ ಕಳ್ಳತನಕ್ಕೆ ಮುಂದಾದರೆ, ಕೆಂಪಮ್ಮ ಸುಂದರವಾಗಿದ್ದರೂ ಅವಳ ಗಂಡ ಕುರುಪಿಯಾದರೂ ಅವಳು ಕಡಲೇ ಪುರಿ ಮಾರಿ ಜೀವನ ನಡೆಸುತ್ತಿದ್ದಳು. ಇವು ಅವಳ ಸಾತ್ವಿಕ ಗುಣಗಳಾಗಿವೆ. ಯಾರೋ ಗಿರಾಕಿ "ದುಡ್ಡು ನಾಳೆ ಕೊಟ್ಟರೆ ಆಗುತ್ತದೆಯೋ?" ಎಂದು ಕೇಳಿದ ಪ್ರಶ್ನೆಗೆ ಕೆಂಪಮ್ಮ ಅಂಗೆ

ಮಾಡಿ ಬುದ್ಧಿ ನೀವು ಎಲ್ಲಿ ಓಡಿ ಹೋದಿರ ಇಷ್ಟರಮ್ಯಾಗೆ ಕೊಟ್ಟರೂ ಆತೂ, ಬಿಟ್ಟರೂ ಆತು. ಇಷ್ಟು ದಿನ ವ್ಯಾಪಾರ ಮಾಡಿ ನಿಮಗೆ ಅಚ್ಚೇರು ಮರಿ ಕೊಡ್ಲಾರ? ನಿಮ್ಮ ಇಸ್ವಾಸ ಇದ್ರೆ ಸಾಕು ಬುಡಿ ಬುದ್ದಿ"ಳ. ಎಂದು ಹೇಳುವ ಕೆಂಪಮ್ಮ ಅನಕ್ಷರಸ್ಥಳು, ಅವಳು ಬಡತನದಲ್ಲಿದ್ದರೂ ಅವಳ ಸಾತ್ವಿಕ ಉದಾರ ಗುಣಗಳು ಕಾಣುತ್ತವೆ. ಹೆತ್ತವರ ಪುಣ್ಯದಲ್ಲೂ ಸಹ ಬಡತನದ ಜೀವನ ಚಿತ್ರಣ ತುಂಬಾ ಸೊಗಸಾಗಿದೆ.

ಹೀಗೆ ಎಂ.ವಿ.ಸೀ. ರವರ ಕಥೆಗಳಲ್ಲಿ ಕಂಡುಬರುವ ಪಾತ್ರವರ್ಗ ಮಧ್ಯಮವರ್ಗದ ಬಡಕುಟುಂಬದವರ ಜೀವನ, ಕಷ್ಟ, ಅವರ ಬದುಕನ್ನು ಯತಾವತ್ತಾಗಿ ತಮ್ಮ ಕಥೆಗಳಲ್ಲಿ ಚಿತ್ರಿಸುವುದು ಅವರ ಕಥೆಗಳಲ್ಲಿ ಬಡತನದ ಚಿತ್ರಣವನ್ನು ಎಳೆ-ಎಳೆಯಾಗಿ ಓದುಗರಿಗೆ ಮನವರಿಕೆ ಮಾಡಿಕೊಡುತ್ತಾರೆ.

**ವ್ಯಕ್ತಿ ಚಿತ್ರ ಪ್ರಧಾನ ಕಥೆಗಳು :**

ಎಂ.ವಿ.ಸೀ.ರವರ ಹಲವು ಕಥೆಗಳು ವ್ಯಕ್ತಿಚಿತ್ರ ಪ್ರಧಾನ ಕತೆಗಳಾಗಿವೆ ಇಂತಹ ಕಥೆಗಳಲ್ಲಿ ವ್ಯಕ್ತಿಯನ್ನು ಪ್ರಧಾನವಾಗಿಟ್ಟುಕೊಂಡು ಅವನ ಗುಣ ವಿಶೇಷಗಳು, ತ್ಯಾಗ ಮನೋಭಾವನೆ, ಅವನ ಕಷ್ಟ ಸುಖಗಳು, ಅವನ ಗುಣ ಸ್ವಭಾವವನ್ನು ಕುರಿತು ತಿಳಿಸುತ್ತವೆ. ಇಂತಹ ಕಥೆಗಳ ಪ್ರಪಂಚದಲ್ಲಿ ನಮಗೆ ಪರಿಚಿತರಾಗುವ ಜನರು ಹಲವು ರೀತಿಯವರು. ಅಂತಹ ಕಥೆಗಳೆಂದರೆ ನಿಷ್ಪ್ರಯೋಜಕ, ತಂತಿ-ಕಿತ್ತ ಪಿಟೀಲು, ಆ ಚೋಟುದ್ದ ಹುಡುಗ, ಸುಂದರ ಪರಿವರ್ತನೆ ಹಾಗೂ ಜೀವನ ನಾಟಕ ಸಂಕಲನದಲ್ಲಿ ಬರುವ ಎಲ್ಲಾ ಕಥೆಗಳು ವ್ಯಕ್ತಿಚಿತ್ರ ಪ್ರಧಾನ ಕಥೆಗಳಾಗಿವೆ.

**ನಿಷ್ಪ್ರಯೋಜಕ :**

ಇದು ಸೀನನ ವ್ಯಕ್ತಿತ್ವವನ್ನು ಚಿತ್ರಿಸುವಂತಹ ಒಂದು ಉತ್ತಮವಾದ ಕಥೆಯಾಗಿದೆ. ಈ ಕಥೆಯಲ್ಲಿ ಕಥೆಗಾರನ ಉದ್ದೇಶ ತೀರ ಸ್ಪಷ್ಟವಾಯಿತೇನೂ ಎಂಬ ಶಂಕೆ ಬಂದರೂ ಕಥೆಯಲ್ಲಿ ಮೂಡಿಬಂದ ತಾಯಿಯ ಚಿತ್ರ, ಎಲ್ಲಾ ಕುಂದುಕೊರತೆಗಳನ್ನು ಮರೆಸುತ್ತದೆ. 'ವಕೀಲನಾಗಿ' ಎಂಬ ಬೋರ್ಡ್ ಹಾಕಿದ್ದರೆ ಎಷ್ಟು ಹಿಗ್ಗುತ್ತಿದ್ದರೋ ಅಷ್ಟೇ ಹಿಗ್ಗಿದರು ಕಾವೇರಮ್ಮ. ಮಗ ಟೈಲರೆಂದು ಹಲಗೆ ಹಾಕಿದಾಗ, ಯಾವ ಗಳಿಗೆಯಲ್ಲಿ ಆ ಪಾಪಿ (ಸಾಲಗಾರ) ಸೀನನ ಹೆಸರು ಬರೆದ ಹಲಗೆ ಹೊಯ್ದನೋ, ಸೀನ ಕಣ್ಮರೆಯಾಗಬೇಕೆ ಇಂತ ವಾಕ್ಯಗಳಲ್ಲಿ ಮಿಂಚುವ ತಾಯ್ತನದ ಚಿತ್ರ ಸೊಗಸಾದದ್ದು. ಸೀನ ಚಿಕ್ಕಂದಿನಿಂದ ಪಟಿಂಗನೆನಿಸಿಕೊಂಡು ದೊಡ್ಡವನಾದಂತೆಲ್ಲಾ ಕೆಲಸಕ್ಕೆ ಬಾರದವನೆನೆಸಿಕೊಂಡು ಅವನು ಜೀವನದಲ್ಲಿ ಬೇಸತ್ತು ಸ್ವಂತ ದುಡಿಯಬೇಕೆಂದು ಮನೆಬಿಟ್ಟು ಹೋಗಿ ಕೆಲಸಕ್ಕೆ ಸೇರಿದ. ಆದರೆ ೧೯೪೨ ರ ಹೋರಾಟಕ್ಕೆ ಸೇರಿ ನಿಷ್ಪ್ರಯೋಜಕನೆನಿಸಿಕೊಂಡ ಸೀನ ಜೀವತೆತ್ತ. ಸೀನ ಕಥೆಯ ಪ್ರಾರಂಭದಲ್ಲಿ ಕೆಲಸಕ್ಕೆ ಬಾರದವನೆನಿಸಿಕೊಂಡರು ಕೊನೆಗೆ ಸ್ವಾತಂತ್ರ್ಯ ಹೋರಾಟಕೋಸ್ಕರ ತನ್ನ ಜೀವನವನ್ನು ಕೊಡುವುದು ಸೀನನ ಉದಾತ್ತತೆಯನ್ನು ಚಿತ್ರಿಸುತ್ತದೆ.

**ತಂತಿಕಿತ್ತ ಪಿಟೀಲು :**

ಈ ಕಥೆಯ ವಸ್ತು ಹಳೆಯದಾದದ್ದು. ಕಥೆಯಲ್ಲಿ ಒಂದು ತಂತಿ ಕಿತ್ತ ಪಿಟೀಲನ್ನು ಸೊಗಸಗಿ ನುಡಿಸುತ್ತಿದ್ದು, ನಿರ್ಲಿಪ್ತವಾದ ಜೀವನ ನಡೆಸಿ ಬಾಳಿನಿಂದ ಮರೆಯಾದ ಸಂಗೀತಗಾರನ ಕಥೆ ತಂತಿ ಕಿತ್ತ ಪಿಟೀಲಾಗಿದೆ. ಇಲ್ಲಿ ಸರಳೆಯನ್ನು ಕಳೆದುಕೊಂಡು ನಂತರ ಸಂಗೀತದಲ್ಲಿ ಅವಳನ್ನು ಕಾಣುವ ಮೂಲಕ ಪಿಟೀಲನ್ನು ನುಡಿಸುವಂತದ್ದು.

ಒಂದು ತಂತಿಯಿಲ್ಲದೇ ಇದ್ದ ಪಿಟೀಲನ್ನು ನುಡಿಸುತ್ತಿದ್ದ ರಾಮಚಂದ್ರನು ತನ್ನ ಎದೆಯನ್ನು ತಟ್ಟಿ "ಈ ಪಿಟೀಲಿನ ಮೂರು ತಂತಿ ಕಿತ್ತುಹೋಗಿದೆ. ಆದರೂ ನಡೆಯುತ್ತಾ ನುಡಿಯುತ್ತಾ ಇಲ್ಲವೆ?" ಎಂದು ಪ್ರಶ್ನಿಸುತ್ತಾನೆ. ಇದು ಜೀವನಕ್ಕೆ ಅನ್ವಯಿಸುವ ಮಾತು. ಸರಿಯಾಗಿ ಪರಿಶೀಲಿಸಿದರೆ ಈ ಸಂಗೀತಗಾರನ ಮಾತೆಲ್ಲಾ ರೂಪಾಲಂಕಾರದಲ್ಲಿಯೇ ನಡೆಯುತ್ತದೆ. ಅದಕ್ಕೆ ಹೊಂದಿಕೊಳ್ಳುವ ಹೆಸರು ಸನ್ನಿವೇಶಗಳನ್ನು ಕತೆಗಾರರು ಸೃಷ್ಟಿ ಮಾಡಿದ್ದಾರೆ. ಇಲ್ಲಿರುವ ವ್ಯಕ್ತಿಗಳು ಮೂವರೇ, ಹೂವಿನ ಹೆಸರು ತಿಳಿಯದಿದ್ದರೂ ಅದರ ಮಧುವನ್ನು ಹೀರಬಲ್ಲ ದುಂಬಿಯಂತೆ ರಾಗ ಮಧುಪಾನ ಕತೆಗಾರ. ಶಾಸ್ತ್ರೋಕ್ತವಾಗಿ ನುಡಿಸಿ ಅನುಭವಿಸಬಲ್ಲ ಪಿಟೀಲುಗಾರ ಅದರ ಬೆಲೆಯನ್ನು ಕಟ್ಟಬಲ್ಲ ಶಾಸ್ತ್ರಿ. ಇಲ್ಲಿ ಶಾಸ್ತ್ರಿಗೆ ಕೆಲಸವಿಲ್ಲ ಆದರೂ ಬಟ್ಟೆಯನ್ನು ತಗಲುಹಾಕುವುದಕ್ಕೆ ಒಂದು ಮಳೆ ಬೇಡವೆ?

ಜೀವನದಲ್ಲಿ ಬೇಸರಗೊಂಡು ಹೆಂಡತಿಯನ್ನು ಕಳೆದುಕೊಂಡು ಪಿಟೀಲು ನುಡಿಸಿ ಬಿಕ್ಷೆ ಬೇಡಿ ಜೀವನ ಮಾಡುತ್ತಿದ್ದ ಜೀವಿತದ ಪೂರ್ಣ ಚಿತ್ರಣ ಇಲ್ಲಿ ಬಂದಿಲ್ಲ. ಅದೆಲ್ಲಾ ಅಸ್ಪಷ್ಟ. ಕಥೆಗಾರನು ತನ್ನ ನೆನಪಿನಿಂದ ಮತ್ತೆ ಕೂಡಿಸಿದ ಅವ್ಯಕ್ತ ಚಿತ್ರ ಸಂಗೀತಗಾರನ ಮಾತಲ್ಲಿ ಅರ್ಥವಾಗುತ್ತದೆ. ಅವನ ಜೀವನದಲ್ಲಿ ಹೇಳಿಕೊಳ್ಳಬಾರದ್ದೇನೂ ಇರಲಿಲ್ಲ. ಆದರೆ ಹೇಳಿ ಮುಗಿಸುವುದಕ್ಕಾಗುವುದಲ್ಲ. ಅದು ಅವನ ಪ್ರಿಯವಾದ ರಾಗ ಲಲಿತ. ಅದನ್ನು ಹೆಚ್ಚುಹೊತ್ತು ನುಡಿಸಲಾರ. "ಲಲಿತ ನನ್ನ ಬಳಿ ಹೆಚ್ಚುಹೊತ್ತು ಇರುವುದಿಲ್ಲ, ಓಡಿಹೋಗಿಬಿಡುತ್ತಾಳೆ, ಚಂಚಲೆ ಸ್ವಾಮಿ" ಎನ್ನುವ ಮಾತಿನಲ್ಲಿ ಒಳಗನ್ನೆಲ್ಲಾ ಹಿಂಡಿಬಿಡುವ ಯಾವುದೋ ತೀವ್ರ ಆಘಾತದ ಪ್ರತಿಧ್ವನಿ ನಮ್ಮಲ್ಲಿಯೂ ಗುಡುಗುತ್ತದೆ. ಆದರೆ ಅಸ್ಪಷ್ಟತೆಯಿಂದ ಕಥೆಗಾರರ ನೆನಪು ತನ್ನ ಬಾಲ್ಯದ ರಾಮಚಂದ್ರ ಅವನ ಸಂಗೀತ–ಲಲಿತ ಎಂಬ ಹೆಂಡತಿ–ತಂತಿ ಕಿತ್ತ ಪಿಟೀಲು–ಬೆಳ್ಳಿಯ ತಗಡು ಅದರಲ್ಲಿ ಇವರಿಬ್ಬರ ಹೆಸರು ಇವೆಲ್ಲದ್ದರಿಂದ ಒಂದು ಕಥೆ ದುರಂತ ಕತೆಯನ್ನು ಸೃಷ್ಟಿಸಿತು. ಅಷ್ಟಾದರೂ ಒಗಟು ಒಗಟಾಗಿಯೇ ಉಳಿಯುತ್ತದೆ.

ಈ ಒಗಟನ್ನು ಬಿಡಿಸಲಾರದ ಗಂಟಾಗಿ ಉಳಿದುಕೊಂಡಿರುವುದರಲ್ಲಿಯೇ ಈ ಕಥೆ ತನ್ನ ಮೇಲ್ಮೆಯನ್ನು ಮೆರೆಯುತ್ತದೆ. ಕಥೆಯ ಹೆಸರು "ತಂತಿ ಕಿತ್ತ ಪಿಟೀಲು" ಆದರೂ ಇದರಿಂದ ಹೊರಹೊಮ್ಮವ ಸಂಗೀತದಲ್ಲಿ ಯಾವ ಅಪಶೃತಿಯು ಇಲ್ಲ. ಮಧು–ಮಧುರವಾದ ಗಾಯನ ಇನ್ನೂ ಕೇಳಿಬರುತ್ತಿದೆ. ಬೀದಿಯಲ್ಲಿ ಯಾವ ಚೌಕದಲ್ಲಿ ಯಾವ ವಾದ್ಯಗಾರನನ್ನು ನೋಡಿದರೂ ಈ ಕಥೆಯನ್ನು ಓದಿದವರಿಗೆ ನೆನಪು ಬರುವುದಿಲ್ಲ.

**ಆ ಚೋಟುದ್ದ ಹುಡುಗ :**

ಈ ಕಥೆ ಒಬ್ಬ ತಂದೆ-ತಾಯಿಯನ್ನು ಕಳೆದುಕೊಂಡ ಅನಾಥ ಹುಡುಗನದು. ಬೂಟ್ ಪಾಲಿಶ್ ಮಾಡುವ ಹುಡುಗನ ಕಥೆ ಇಲ್ಲಿ ಕೆಳವರ್ಗದವನಾದ ಹುಡುಗ ಅವನು ಆಡುವ ಕೆಲವು ಮಾತುಗಳು ಅವನ ವ್ಯಕ್ತಿತ್ವಕ್ಕೆ ಹಿಡಿದ ಕನ್ನಡಿಯಂತೆ ಕಂಡುಬರುತ್ತವೆ. ಆ ಹುಡುಗ ವಯಸ್ಸಿನಲ್ಲಿ ಕಿರಿಯವನಾದರೂ ಅವನು ಆಡುವ ಮಾತುಗಳು ಅರ್ಥವತ್ತಾಗಿವೆ. ಈ ಕಥೆಯಲ್ಲಿ ವ್ಯಕ್ತಿಚಿತ್ರ ಪ್ರಧಾನವಾಗಿವೆ.

ಎಂ.ವಿ.ಸೀ ರವರ 'ಜೀವನ ನಾಟಕ' ಗಮನಾರ್ಹವಾದ ಸಂಕಲನ ಇದು ನಿಜವಾಗಿ ಕಥಾ ಸಂಕಲನವಲ್ಲ, ವ್ಯಕ್ತಿಚಿತ್ರಗಳ ಸಂಕಲನ. ಇಲ್ಲಿ ಒಂಭತ್ತು ವ್ಯಕ್ತಿಗಳ ಚಿತ್ರಗಳಿವೆ. ಗುಮಾಸ್ತೆ ಗುಂಡಪ್ಪ, ನಾಟಕದ ಸುಬ್ಬಣ್ಣ,ಅರಮನೆ ಶಾಮರಾಯರು, ಭಿಕ್ಷನ್ನಾದ ಭಾಗೀರತಮ್ಮ, ಜಗುಲಿ ಜೋಯಿೀಸರು, ಹಾಲಿನ ಹನುಮಕ್ಕ, ಕೊಟ್ಟಣದ ನೀಲಮ್ಮ, ಆನೆಕಾಲು ರಾಮರಾಯರು ಮತ್ತು ಒಂಟಿ ಸಂಜೀವ ಇವರೆಲ್ಲ ಎಲ್ಲಿಯೂ ಹೇಗೋ ಬದುಕಿ ಜೀವನ ಸವೆಸಿದವರು, ಪ್ರಸಿದ್ಧರಲ್ಲ, ಹಣವಂತರಲ್ಲ ಒಂದು ರೀತಿಯಲ್ಲಿ ಇವರು ಮನುಷ್ಯ ಸ್ವಭಾವದ ವೈಚಿತ್ರಗಳನ್ನು ತೋರಿಸುವವರು. ಮತ್ತೊಂದು ರೀತಿಯಲ್ಲಿ ಮುಗ್ಧತನದಿಂದ ಒಳ್ಳೆಯವರಾಗಿ ಬಾಳಿದವರು.

**ಗುಮಾಸ್ತೆ ಗುಂಡಪ್ಪ :**

ಜಡ ಸ್ವಭಾವದವನೆನಸಿಕೊಂಡ ಗುಂಡಪ್ಪ ಮಾಡುವಷ್ಟು ಕೆಲಸವನ್ನು ನಿಜವಾಗಿ ಮನೆಯಲ್ಲಿ ಬೇರೆ ಯಾರೂ ಮಾಡುವುದಿಲ್ಲ. ಮನೆಯ ಯಜಮಾನಿ ಗಂಡನಿಗೆ, ನಿಮಗಾದರೂ ಗುಂಡಪ್ಪ ಪಂಚೆ ಹೊಗೆದು ಕೊಡುತ್ತಾನೆ. . . ನನಗೂ ಸೀರೆ ಹೊಗೆದುಕೊಡುವುದಕ್ಕೆ ಯಾರಾದರೂ ಇದ್ದರೆ ಹೊತ್ತಿಗೆ ಸರಿಯಾಗಿ ಅಡುಗೆ ಮಾಡಬಹುದಾಗಿತ್ತೆಂದು ಕೊಂಕು ನುಡಿದರೆಂದು ಮರುದಿನ ಗುಂಡಪ್ಪ ಯಾವ ಕೊಂಕು ಇಲ್ಲದೆ ನೀನು ಅಲ್ಪ ವಿಚಾರಕ್ಕೆಲ್ಲ ಶೋಕಪಟ್ಟರೆ ಹೇಗೆ? ನೀನು ನನ್ನ ಅತ್ತಿಗೆಯ ಸಮಾನ ಎಂದು ಬಿಡುತ್ತಾನೆ. ಗುಂಡಪ್ಪ ಸಾವಿತ್ರಮ್ಮನ ಸೀರೆಯನ್ನು ಒಗೆದುಕೊಡುತ್ತಾನೆ. ಆದರೆ ಸಾವಿತ್ರಮ್ಮನಿಗೆ ಅದರ ಬಗ್ಗೆ ಅಸಮಧಾನ ನಂತರ ಗುಂಡಪ್ಪ ಮನೆಯನವರಿಗೆಲ್ಲ ಮೆಚ್ಚುಗೆಯಾಗಿ ಎಲ್ಲರ ಕೆಲಸದಲ್ಲಿಯೂ ಸಹಭಾಗಿಯಾಗುವ ಗುಣ ಅವನಲ್ಲಿ ಇತ್ತು. ವೆಂಕಟರಾಮು ಮತ್ತು ಅವರ ಮನೆಯವರೆಲ್ಲರೂ ಕಾಯಿಲೆಗೆ ಒಳಗಾದಾಗ ಅವರೆಲ್ಲರಿಗೂ ಉಪಕಾರ ಮಾಡುತ್ತಾನೆ.

ಕೊನೆಗೆ ಗುಂಡಪ್ಪ ಕಾಯಿಲೆಗೆ ತುತ್ತಾಗಿ ನರಳುವಂತಹ ಸ್ಥಿತಿ ಬರುತ್ತದೆ. ಆದರೆ ಅವರು ಕಾಯಿಲೆಯಿಂದ ಇನ್ನೂ ಚೇತರಿಸಕೊಂಡಿರಲಿಲ್ಲ. ನಂತರ ಗುಂಡಪ್ಪ ಕೊನೆ ಉಸಿರು ಬಿಡುವಾಗ ಮನೆಯಲ್ಲಿ ಸಂಗ್ರಹಿಸಿದ ಹಣದ ಬಗ್ಗೆ ತಿಳಿಸಲು ಹೋಗಿ ಸಾಯುತ್ತಾನೆ. ಅವನ ಉದಾರ ಗುಣ ಕಂಡುಬರುತ್ತದೆ. ವೆಂಕಟರಾಮುವಿನ ಮಗಳ ಮದುವೆಗೆ, ಮಗ ರಾಮುವಿನ ಮುಂಜಿಗೆ ಅನುಕೂಲವಾಗುವಂತೆ ಹಣವನ್ನು ಸಂಗ್ರಹಿಸಿ ಗುಂಡಪ್ಪ ಉಪಕಾರ ಮಾಡುತ್ತಾನೆ. ಈ ಕಥೆಯಲ್ಲಿ

ಅವನ ಸಾತ್ವಿಕ ಗುಣ, ನಿಸ್ವಾರ್ಥ ಮನೋಭಾವನೆ ಹಾಗೂ ಎಲ್ಲರೊಂದಿಗೂ ಅವನು ಹೊಂದಿಕೊಂಡು ಹೋಗುವ ಅವನ ಗುಣ ಕಾಣುತ್ತದೆ, ಆದ್ದರಿಂದ ಇದು ಒಂದು ಉತ್ತಮ ವ್ಯಕ್ತಿಚಿತ್ರ ಪ್ರಧಾನವಾದ ಕತೆಯಾಗಿದೆ.

**ಹಾಲಿನ ಹನುಮಕ್ಕ :**

ಹಾಲಿನ ಹನುಮಕ್ಕ ರಾಮಚಂದ್ರ ಅಗ್ರಹಾರದಲ್ಲಿ ಹಾಲನ್ನು ಮಾರುತ್ತಿದ್ದಳು. ಹಾಲಿನ ಮಾರಾಟದಿಂದ ಅವಳು ಜೀವನ ನಿರ್ವಹಿಸುತ್ತಿದ್ದಳು. ಹನುಮಕ್ಕನ ಗಂಡ ಪರಸ್ತ್ರೀಯ ಸಹವಾಸ ಮಾಡಿ ಇದ್ದುದ್ದೆಲ್ಲವನ್ನು ಮಾರಿ ಹನುಮಕ್ಕನ ಪಾಲಿಗೆ ಒಂದು ಎಮ್ಮೆಯನ್ನು ಬಿಟ್ಟು ಹೋಗಿರುತ್ತಾನೆ. ಅವಳು ಕಷ್ಟಪಟ್ಟು ಹಾಲುಮಾರಿ ಹಣ ಸಂಪಾದಿಸಿ ಅದರಿಂದ ಅವಳಿಗೂ, ಅವಳ ಮಗಳು, ಮೊಮ್ಮಗಳಿಗೂ ಬೇಕಾದ ಒಡವೆಗಳನ್ನು ಮಾಡಿಸಿಕೊಂಡಿರುತ್ತಾಳೆ. ಹೀಗೆ ಮಾತಿಗೆ ಮಾತು ಬೆಳೆದು ಒಂದು ಸಾರಿ ಗುಂಡಪ್ಪ ಮೈಮೇಲೆ ಒಡವೆ ಹಾಕಿಕೊಂಡರೆ ಜನ ಹಾಡಿಕೊಂಡಾರು ಎಂದೆ. ಅದಕ್ಕೆ ಅವಳು 'ಒಡವೆ ಎಲ್ಲಾ ಕಳುವಾದರೆ ಅವನ್ನು ಕೊಟ್ಟೋರಿಗೆ ಏನು ಉತ್ತರ ಹೇಳಲಿ? ಕಳುವಾದುವು ಎಂದಾರೆ ನಂಬರಾ? ದಕ್ಕಿ ಹಾಕಿಕೊಳ್ಳೋದಕ್ಕೆ ಆಟ ಹೂಡಿದ್ದಾಳೆ ಅಂತಾರೆ. ಮೈತುಂಬಾ ಒಡವೆ ಹಾಕಿಕೊಂಡ್ರೆ, ಗಂಡನ್ನ ತಿನ್ಕೊಂಡ ಮುಂಡೆ ಮಿಂಡದ್ರು ಕೊಟ್ಟ ಒಡವೆ ಹಾಕ್ಕೊಂಡು ಮೆರಿತಾಳೆ ಅಂತಾ ತಾನೇ ಅಂತಾರೆ ಜನ? ಅಂದು ಕೊಳ್ಳಲಿ. ಹಾಗೆ ಅನ್ನೋ ಜನ ಒಡವೆ ಹೋದರೆ ತೆಗೆದುಕೊಟ್ಟಾರೋ? ಇಲ್ಲ. ಇನ್ನು ಜನಕ್ಕೆ ಯಾಕೆ ಹೆದರಬೇಕು? ನಮ್ಮ ಮನಸ್ಸು ಸುದ್ದವಾಗಿದ್ದರೆ ಸರಿ ಅಂತ ಅಂದಳು. ಇಲ್ಲಿ ಹನುಮಕ್ಕ ಎಲ್ಲವನ್ನೂ, ಸಮಾಜವನ್ನೂ ಧೈರ್ಯವಾಗಿ ಎದರಿಸುವಂತ ಮನೋಭಾವನೆ ಅವಳಲ್ಲಿ ಕಂಡುಬರುತ್ತದೆ.

ಅವರ ಕಥೆಗಳಲ್ಲಿ ಕಂಡುಬರುವ ಪಾತ್ರಗಳು ಓದುಗರಿಗೆ ಅನುಕಂಪ, ಕರುಣೆಯನ್ನು ಹುಟ್ಟಿಸುತ್ತವೆ. ಪ್ರಮುಖ ಪಾತ್ರಗಳೆಂದರೆ ಗುಂಡಪ್ಪ, ಹನುಮಕ್ಕ, ಭಾಗೀರಥಿ, ನೀಲಮ್ಮ, ಅರಮನೆ ಶಾಮರಾಯರು, ಶ್ರೀನಿವಾಸರಾಯರು ಇವರಾರು ನಿಷ್ಕರುಣಿಗಳಲ್ಲ. ಅವರ ವ್ಯಕ್ತಿತ್ವವಾಗಲೀ ಗುಂಡಪ್ಪನ ನಿಸ್ವಾರ್ಥ ಗುಣ, ಅವನ ಅನುಕಂಪ, ಕರುಣೆ, ಪರೋಪಕಾರ ಓದುಗರಲ್ಲಿ ಅಚ್ಚಳಿಯದೇ ಉಳಿಯುತ್ತದೆ. ಇಲ್ಲಿ ಕಂಡುಬರುವ ವ್ಯಕ್ತಿಗಳು ಜೀವಂತವಾಗಿಲ್ಲದಿದ್ದರೂ, ಅವರ ಗುಣಗಳು ಓದುಗರಿಂದ ಮರೆಯಾಗಿಲ್ಲ ಎನ್ನುವುದು ಸ್ಪಷ್ಟ

ಅವರ ಕಥೆಗಳಲ್ಲಿ ೧೯೪೦ ರ ಕಾಲಘಟ್ಟದಲ್ಲಿ ಮೈಸೂರಿನ ಒಂದು ವಾತಾವರಣ ಚಿತ್ರಣ, ಅಲ್ಲಿನ ಶ್ರೇಣೀಕೃತ ಸಮಾಜದಲ್ಲಿ ಇದ್ದಂತ ವಿನಿಮಯ ಪದ್ಧತಿ, ವಧುದಕ್ಷಿಣೆ ಮುಂತಾದ ಸಾಮಾಜಿಕ ವ್ಯವಸ್ಥೆಯನ್ನು ತಿಳಿಸುತ್ತದೆ. ಅಲ್ಲದೆ ಅಂದಿನ ಸಮಯದಲ್ಲಿ ಮೈಸೂರು ರಾಜ್ಯವಾಗಿ ರಾಜರ ಆಡಳಿತಕ್ಕೆ ಒಳಪಟ್ಟಿತ್ತು. ಅಂದು ಮೈಸೂರಿನಲ್ಲಿ ಇದ್ದಂತ ಸಾಂಸ್ಕೃತಿಕ ವಾತಾವರಣ ಅಂದರೆ ಸಂಗೀತ, ನಾಟಕ, ಜನರ ಸಂಸ್ಕೃತಿ, ಜನರ ಮಡಿ–ಮೈಲಿಗೆ ವಿಚಾರವನ್ನು, ಜಾತಿ–ಜಾತಿಗಳ ಬಗ್ಗೆ ಇದ್ದ ನಂಬಿಕೆಗಳನ್ನು ತಿಳಿಸುತ್ತದೆ. ಲೇಖಕರು ಬೇರೆ ಕಡೆ ಬಂದು ನೆಲಸಿದ್ದರು ಅವರ ಮನಸ್ಸಿನಂದ ಈ ವಾತಾವರಣ ಅಚ್ಚಳಿಯದಂತೆ ಉಳಿದಿದೆ.

ಎಂ.ವಿ.ಸೀ. ತಮ್ಮ ಕತೆಗಳಲ್ಲಿ ಬಳಿಸಿಕೊಂಡಿರುವ ವಸ್ತು ಬಡತನ, ಜೀವನ ಚಿತ್ರಣ, ಸಾಂಸಾರಿಕ ಜೀವನ, ಧಾರ್ಮಿಕ ಪರಿಸರ, ವ್ಯಕ್ತಿ ಪ್ರಧಾನ ಚಿತ್ರಗಳು ಎಂಬ ವಸ್ತುಗಳಾಗಿ ಕಂಡುಬರುತ್ತವೆ. ಅವರ ಕಥೆಗಳಲ್ಲಿ ಪ್ರೀತಿ-ಪ್ರಣಯ, ಕೌಟುಂಬಿಕ ಜೀವನದಲ್ಲಿ ಬರುವ ಸಮಸ್ಯೆಗಳು, ಮಾನವೀಯ ಮೌಲ್ಯ, ತ್ಯಾಗ ಮನೋಭಾವನೆ ಇವುಗಳನ್ನು ಓದುಗರಿಗೆ ಮನವರಿಕೆ ಮಾಡಿಕೊಡುತ್ತಾರೆ. ಅವರ ಸಣ್ಣಕತೆಗಳಲ್ಲಿ ಸಮಾಜದ ಎಲ್ಲಾ ಘಟಕದ ಪಾತ್ರಗಳು ಕಂಡುಬರುತ್ತವೆ. ವೈದಿಕ ಧರ್ಮ ಎಂ.ವಿ.ಸೀ. ರವರ ಮೇಲೆ ಪ್ರಭಾವ ಬೀರಿದಂತೆ ಕಂಡುಬರುತ್ತದೆ.

ಎಂ.ವಿ.ಸೀ.ರವರ ಕಥೆಗಳನ್ನು ಓದುವುದೆಂದರೆ ಉತ್ತಮ ವರ್ಣಚಿತ್ರಗಳನ್ನು ನೋಡಿ ಆನಂದಿಸಿದಂತೆ ಚಿತ್ರಗಾರನ ಪ್ರತಿಭೆಯೂ, ವ್ಯಕ್ತಿತ್ವವೂ ಆತನ ಉತ್ತಮ ಚಿತ್ರಗಳಲ್ಲಿ ಹೊರಹೊಮ್ಮುವಂತೆ ಇವರ ಕಥೆಗಳಲ್ಲೂ ಮೇಲ್ಪಂಕ್ತಿಯಾಗಬಲ್ಲ ಕೌಶಲ್ಯ ಕಂಡುಬರುತ್ತದೆ. ಅವರ ಕಥೆಗಳನ್ನು ಸಮಗ್ರವಾಗಿ ನೋಡಿದರೆ ಅರ್ಧ ಶತಮಾನದ ಹಿಂದೆ ಜನಪ್ರಿಯವಾಗಿದ್ದ ವಸ್ತುವನ್ನು ಅವಲಭಿಸಿರುವುದು ಕಂಡುಬರುತ್ತದೆ. ಅಂದರೆ ಈ ಕಥೆಗಳು ಇಂದಿನ ಜನತೆಗೆ ರುಚಿಸುವುದಿಲ್ಲ ಎಂದರ್ಥವಲ್ಲ. ಅವು ಹಿಂದಿನ ಸವಿ ನೆನಪನ್ನು ಹಾಡುವ ಸೊಗಸಾದ ಗೀತೆಗಳಿಂತಿವೆ.

* * * * *

## ಅಡಿ ಟಿಪ್ಪಣಿ

೧) ಉಮಾಪತಿ – ಸಾಹಿತ್ಯ ಸ್ವರೂಪ – ಪುಟ ಸಂಖ್ಯೆ – ೮೧.

೨) ಶ್ರೀವತ್ಸ, ಅನಂತ ಪದ್ಮರಾವ್, ಹೆಚ್.ಎಂ.ರಂಗನಾಥ್ – ಆಸ್ವಾದ – ಪುಟಸಂಖ್ಯೆ –೧೯೪

೩) ಶ್ರೀವತ್ಸ, ಅನಂತ ಪದ್ಮರಾವ್, ಹೆಚ್.ಎಂ.ರಂಗನಾಥ್ – ಆಸ್ವಾದ – ಪುಟಸಂಖ್ಯೆ –೨೧

೪) ಪ್ರೊ.ಎಂ.ವಿ.ಸೀತಾರಾಮಯ್ಯ – ಕರುಣಾಲಹರಿ – ಪುಟಸಂಖ್ಯೆ –೫೨.

## ಅಧ್ಯಾಯ-೫

## ಶೈಲಿ, ತಂತ್ರ ಮತ್ತು ಭಾಷೆ

ಒಂದೇ ಮನೋಧರ್ಮದ, ಒಂದೇ ಪರಂಪರೆಯ ಲೇಖಕರಾದರೂ ಪ್ರತಿಯೊಬ್ಬ ಲೇಕಖನ ಭಾಷೆ, ತಂತ್ರ ಮತ್ತುಶೈಲಿ ವಿಭಿನ್ನವಾಗಿರುತ್ತದೆ. ಪ್ರತಿಭಾ ಮೂಸೆಯಲ್ಲಿ ಹೊರ ಹೊಮ್ಮುವ ಕಲಾಕೃತಿ ಅಯಾ ವ್ಯಕ್ತಿಯ ವೈಯುತ್ತಿಕತೆಯನ್ನು ಪ್ರತಿಬಿಂಬಿಸುವುದು ಸಹಜವಾಗಿಯೇ ಇದೆ. ನವೋದಯ ಕಾವ್ಯ ಪರಂಪರೆಯಲ್ಲಿ ಎಲ್ಲ ಕವಿಗಳ ಆಶಯ ಮನೋಧರ್ಮ, ವಸ್ತು, ಒಂದೇ ಆದರೂ ಪ್ರತಿಯೊಬ್ಬರೂ ತಮ್ಮ ವೈಶಿಷ್ಯವನ್ನು ಎತ್ತಿಹಿಡಿದಿದ್ದಾರೆ. ಸಂಸ್ಕೃತ ಭೂಯಿಷ್ಟ ಶೈಲಿಯ ಕುವೆಂಪು, ಜಾನಪದ ಸೊಗಸಿನ ಬೇಂದ್ರೆ ಸರಸ, ಲಲಿತ ಶೈಲಿಯ ಕೆ.ಎಸ್.ನ ಹೀಗೆ ಅವರವರ ವೈಯುಕ್ತಿಕ ಶೈಲಿಯನ್ನು ಸ್ಪಷ್ಟವಾಗಿ ಗುರುಸಿಸಬಹುದು.

ಹಾಗೆಯೇ ನವೋದಯದ ಎರಡನೇ ಘಟ್ಟದಲ್ಲಿ ಕಂಡುಬರುವ ಆನಂದ, ಆನಂದಕಂದ ಮೊದಲಾದವರು ಕಂಡುಬರುತ್ತಾರೆ. ಇವರ ಸಾಲಿನಲ್ಲಿ ಸಮಕಾಲೀನರಾಗಿ ನಿಲ್ಲಲು ಎಂ.ವಿ.ಸೀಯವರ ಕತೆಗಳಲ್ಲಿ ಸಮಕಾಲೀನ ಸಮಾಜದಲ್ಲಿ ಕಂಡುಬರುವ ಸಾಂಸಾರಿಕ ಜೀವನ ಮತ್ತು ಬದುಕಿನ ಹಲವು ಘಟನೆಗಳಲ್ಲಿ ಕಂಡುಬರುವ ಅಂಶಗಳನ್ನು ಕತೆಗಳ ರೂಪದಲ್ಲಿ ಚಿತ್ರಿಸಿರುವುದು ಕಂಡುಬರುತ್ತದೆ.

ಸಂಸ್ಕೃತದಲ್ಲಿ 'ಗದ್ಯಂ ಕವೀನಾಂ ನಿಕಷಂ ವದಂತಿ' ಎಂಬ ನಾನ್ನುಡಿ ಉಂಟು ಪದ್ಯಕ್ಕಿಂತ ಗದ್ಯ ರಚನೆ ಸಂಸ್ಕೃತದಲ್ಲಿ ಕಷ್ಟವಾದುದರಿಂದ ಮೇಲಿನ ಉಕ್ತಿಪ್ರಚಲಿತ ಗದ್ಯ ರಚನೆ ಕನ್ನಡದಲ್ಲಿ ಕಷ್ಟವಲ್ಲದಿದ್ದರೂ ಅದು ಸ್ಪಷ್ಟ ಸ್ವರೂಪ ಪಡೆಯಲು ಹಲವಾರು ವರುಷಗಳೇ ಬೇಕಾಯಿತು. "ಗದ್ಯದಲ್ಲಿ ಭಾವಕ್ಕಿಂತ ಭಾವನೆಗೆ ಕಲ್ಪನೆಗಿಂತ ಆಲೋಚನೆಗೆ ಸಾರ್ವಭೌಮ ಪದವಿ ಸಂಲಬ್ದವಾಗುವುದರಿಂದ ಭಾಷೆಯ ಗತಿ ಸಹಜವಾಗಿ ಸಾಂದ್ರೀಕರಣಕ್ಕಿಂತ ವಿಕೀರ್ಣತೆಯ ಕಡೆಗೆ ಸಾಗುತ್ತದೆ. ಆದುದರಿಂದ ಲೇಖನಿಗೆ ಪದಪ್ರಯೋಗದಲ್ಲಿ ಹೆಚ್ಚಿನ ಸಾಮರ್ಥ್ಯ ಹಾಗೂ ಹಿಡಿತವಿರಬೇಕಾಗುತ್ತದೆ.

ಲೇಖಕನ ಮನದಲ್ಲಿ ಪ್ರತಿಭೆಯೊಲಿದು, ಹೃದಯವುಮ್ಮಳಿಸಿ, ಪದಗಳೂ ಪದ ಸಮುಚ್ಚಯಗಳೂ ಒಲಿದು-ಸುಳಿಯುವಂತಾದರೆ ಗದ್ಯವೂ ಪದ್ಯವನ್ನು ಮೀರಿಸಬಲ್ಲದು" ಸೀಟಿಯೂದಿದ ಕೂಡಲೇ ಸಿದ್ದವಾಗಿ ಸಮ್ಮುಖದಲ್ಲಿ ನಿಲ್ಲುವ ಸೈನಿಕರಂತೆ ಸಮರ್ಥ ಗದ್ಯ ರಚನೆ ನೆನೆದ ಕೂಡಲೇ ತಾ ಮುಂದಾ, ನಾ ಮುಂದೆಂದೆ ಪದಗಳು ನುಗುತ್ತವೆ, ತನಗೆ ಬೇಕಾದುದನ್ನು ಆಯ್ದುಕೊಂಡು ದುಡಿಸಿಕೊಳ್ಳಬೇಕಾದ ಹವಣಿಕೆ ಅವನ ಪ್ರತಿಭೆಯನ್ನು ಅವಲಂಬಿಸಿರುತ್ತದೆ. ಹೀಗೆ ಭಾವ, ಭಾಷೆಗಳ ಉತ್ತಮ ಸಹಚರ್ಯವನ್ನೆ ಶೈಲಿ ಎಂದು ಕರೆಯಬಹುದಾಗಿದೆ.

ಎಂ.ವಿ.ಸೀಯವರ ಬರವಣಿಗೆ ಅವರದೇ ಆದ ವೈಶಿಷ್ಯತೆ ಹೊಂದಿದೆ. ಅವರು ಸಮಾಜದ ಉನ್ನತರು ಎನಿಸಿಕೊಂಡಿದ್ದ ಬ್ರಾಹ್ಮಣರು ಸಾಮಾನ್ಯವಾಗಿ ಬಳಸುವಂತಹ ಮಡಿವಂತಿಕೆಯ

ಭಾಷೆಯನ್ನು ಬಳಸುತ್ತಿದ್ದರು. ಅವರ ಸಣ್ಣಕತೆಗಳಲ್ಲಿ ಸಮಾಜದ ಸಮಸ್ಯೆಗಳನ್ನು ಅವರ ಜೀವನದಲ್ಲಿ ಅನುಭವಿಸಿದ, ಕಂಡ, ನಮ್ಮ ನಿತ್ಯಜೀವನದಲ್ಲಿ ಗೋಚರಿಸುವ ಘಟನೆಗಳನ್ನು ಸಹಜವಾಗಿ ತಮ್ಮ ಸಾಹಿತ್ಯದಲ್ಲಿ ಚಿತ್ರಿಸಿದ್ದಾರೆ. ಅಲ್ಲದೇ ಕೆಲವೊಂದು ಉತ್ತಮಗುಣಗಳು ಕೇವಲ ಉನ್ನತವರ್ಗದವರಲ್ಲಿ ಮಾತ್ರ ಕಂಡುಬರುವುದಿಲ್ಲ ಇಂತಹ ಗುಣಗಳು ಸಮಾಜದ ಕೆಳವರ್ಗದಲ್ಲಿ ವಾಸಿಸುವ ಬಡಜನರಲ್ಲೂ ಸಹ ಕೆಲವೊಂದು ಉದಾತ್ತವಾದ ಗುಣಗಳು ಕಾಣುತ್ತವೆ ಎಂಬುದನ್ನು ಸೀ ಯವರು ಚಿತ್ರಿಸಿದ್ದಾರೆ.

ಅವರು ಶೈಲಿಯ ವಿಚಾರದಲ್ಲಿ ಈ ರೀತಿ ಅಭಿಪ್ರಾಯ ಇಟ್ಟುಕೊಂಡಿದ್ದಾರೆ "ನನ್ನ ಕಥೆ ಕಾದಂಬರಿಗಳಲ್ಲಂತೂ 'ತಲೆಗೆಲ್ಲಾ ಒಂದೇ ಮಂತ್ರ' ಎನ್ನುವಂತೆ ಏಕ ಕ್ರಾಂತಿಯ ಒಂದೇ ಬಗೆಯ ಶೈಲಿಯಲ್ಲಿ ಬರೆಯುವ ರೀತಿ ನನಗೆ ಒಪ್ಪಿತವಿಲ್ಲ. ಶೈಲಿಯ ವಿಚಾರದಲ್ಲಿ ನಾನು ಯಾವ ಪೂರ್ವಗ್ರಹಿಕೆಯಿಂದಲೂ ಬರೆಯಹೊರಡುವುದಿಲ್ಲ. ನನ್ನ ಕೃತಿಯ ವಸ್ತು ಅಥವಾ ವಿಷಯ ತನ್ನ ಶೈಲಿಯನ್ನು ತಾನೇ ಗೊತ್ತುಮಾಡಿಕೊಳ್ಳುತ್ತದೆ" ೧

ಎಂ.ವಿ.ಸೀ ಯವರ ಲೇಖನ ಕಲೆಯಲ್ಲಿ ಇರುವ ಮುಖ್ಯಲೋಪವೊಂದರಿಂದ ಈ ಕೆಲವು ಗುಣಗಳು ಮುಚ್ಚಿಹೋಗಿವೆ. ಅವರ ಶಕ್ತಿ ಕೆಲವೊಮ್ಮೆ ಮಿಂಚಿನಂತೆ ಹೊಳೆಯುವಾಗ ಮತ್ತೆ ಕೆಲವು ವೇಳೆ ಅತೀ ಸಾಧಾರಣೆಗೆ ಇಳಿದುಬಿಡುತ್ತದೆ. ಆದರೂ ಒಂದು ನಿಶ್ಚಿತವಾದ ಶುಭ್ರವಾದ ಶೈಲಿ-ಹತ್ತಕ್ಕೆ ಹಾದರೆ ಐದಕ್ಕೆ ಅವತರಿಸದೆ ಇರುವ ಶೈಲಿ-ಇವು ಅವರ ಲೇಖನದಲ್ಲೆಲ್ಲಾ ಕಂಡುಬರುತ್ತವೆ.



ಅವರ ಹಲವು ಕಥೆಗಳಲ್ಲಿ (ಉದಾ:- ಕೊಳ್ಳಿದೆವ್ವ) ಈ ಅನುಭವ ಆಗುತ್ತದೆ. ಅವರು ಓದುಗನನ್ನು ಒಂದು ಕ್ಷಣವೂ ಮರೆಯಲಾರದೆ, ಅವರ ಕುತೂಹಲವನ್ನು ಉಳಿಸಿಕೊಂಡು ಬೆಳಸುವ ಪ್ರಯತ್ನದಲ್ಲಿ ಮುಳುಗಿದ್ದಾರೆ ಎನಿಸುತ್ತದೆ. ಹೀಗಾಗಿ ಕಥೆ ಯಾವ ಅರ್ಥವನ್ನು ತುಂಬಿಕೊಳ್ಳುವುದಿಲ್ಲ ಒಂದಿಷ್ಟು ಕುತೂಹಲವನ್ನುಂಟುಮಾಡಿ, ಮನಸ್ಸಿನ ಮೇಲೆ ಹೆಚ್ಚು ಪರಿಣಾಮ ಬೀರದೆ ಮುಗಿದು ಹೋಗುತ್ತದೆ.

ಎಂ.ಸಿ.ಸೀ ಯವರ ಕಥೆಗಳ ಶೈಲಿ ಎಂದರೆ ಮಾಸ್ತಿಯವರ ಶೈಲಿಯನ್ನು ಅನುಸರಿಸಿದ್ದಾರೆ. ಅವರ ಹಲವು ಕಥೆಗಳಲ್ಲಿ ಒಬ್ಬ ಕಥಾನಾಯಕನ್ನು ಸೃಷ್ಟಿಸಿ ಆ ಕಥೆಗೆ ಬೇಕಾದ ಪಾತ್ರಗಳನ್ನು ಸೃಷ್ಟಿಸಿ. ಕಥಾನಾಯಕನ ಪಾತ್ರಕ್ಕೆ ಹೆಚ್ಚು ಮಸ್ಟಿಯನ್ನು ಕೊಟ್ಟು ಹೇಳಬೇಕಾದನ್ನೂ ಆ ಪಾತ್ರದ ಮೂಲಕ ಹೇಳಿಸುತ್ತಾರೆ ಕಥೆಯಲ್ಲಿ ಬರುವ ಪಾತ್ರಗಳ ಮೂಲಕ ದಯೆ, ಅನುಕಂಪ, ಔದಾರ್ಯವನ್ನು ಪಾತ್ರಗಳ ಮೂಲಕ ಅನುಭವದ ನೆಲೆಯಲ್ಲಿ ಅವರು ಕಥೆಯನ್ನು ಹೇಳಿಕೊಂಡು ಹೋಗುತ್ತಾರೆ. ಅವರ ಕಥೆಗಳಲ್ಲಿ ಘಟನಾ ವಿನ್ಯಾಸ ಹೆಚ್ಚಾಗಿ ಕಂಡುಬರುವುದಿಲ್ಲ. ಪಾತ್ರಗಳ ವಿನ್ಯಾಸಕ್ಕೆ ಮಹತ್ವವನ್ನು ಕೊಡುವುದು. ಅದರ ಮೂಲಕ ಸಮಾಜಕ್ಕೆ ಒಂದು ಹೊಸ ಸಂದೇಶವನ್ನು ಕೊಡುವುದು.

ಎಂ.ವಿ.ಸೀ ಯವರು ಅತ್ಯಂತ ಸೊಗಸಾಗಿ ಚಿತ್ರಿಸಿರುವಂತಹ ಕಥೆಯಾದರೂ 'ದೃಷ್ಟಿಲಾಭ' ಈ ಕಥೆ ವಸ್ತು, ತಂತ್ರ ಮತ್ತು ಶೈಲಿ ದೃಷ್ಟಿಯಿಂದ ತುಂಬಾ ಪರಿಣಾಮಕಾರಿಯಾದ ಕಥೆಯಾಗಿದೆ.

ಇಲ್ಲಿ ಶಿವರಾಮಯ್ಯನ ಹೆಂಡತಿಯ ಗುಣ ಆದರ್ಶವಾದದ್ದು, ಅಲ್ಲದೇ ಅವಳಗಂಡ ಕುರುಡ ಎಂದು ತಿಳಿದಿದ್ದರೂ ಅವನೊಂದಿಗೆ ಅನ್ಯೂನ್ಯ ರೀತಿಯಲ್ಲಿ ಸಂಸಾರ ಸಾಗಿಸುವುದು. ಹಾಗೂ ತನ್ನ ಗಂಡನಿಗೆ ಕಣ್ಣುಬರಲೆಂದು ಬೈರಾಗಿಯ ಹತ್ತಿರಹೋಗಿ ಬೇಡಿಕೊಳ್ಳುವುದು. ಅವಳ ವ್ರತ ಮತ್ತು ಸನ್ಯಾಸಿಯ ದಯದಿಂದ ಶಿವರಾಮಯ್ಯನಿಗೆ ಕಣ್ಣು ಬರುವಂತದ್ದು, ಇಲ್ಲಿ ಕಥೆಯ ಪರಿಣಾಮ ಸಾಧಿಸಿ ಶಿವರಾಮಯ್ಯನ ಹೆಂಡತಿ ಕುರೂಪಿ ಎಂದು ತಿಳಿದು ಶಿವರಾಮಯ್ಯ ಸೂಳೆಯ ಸಹವಾಸ ಮಾಡುವುದು, ಕೊನೆಗೆ ಅವನಿಗೆ ಮತ್ತೆ ಕಣ್ಣುಹೋಗುವಂತದ್ದು ಆಗ ಶಿವರಾಮಯ್ಯನಿಗೆ ಜ್ಞಾನೋದಯವಾಗುತ್ತದೆ. ಆದರೆ ಅವನ ಹೆಂಡತಿ ಯಾವ ಪರಿಸ್ಥಿತಿಯಲ್ಲೂ ಸಹ ತನ್ನ ಸಮತೋಲನವನ್ನು ಕಳೆದುಕೊಳ್ಳುವುದಿಲ್ಲ ಹೀಗೆ ಇಲ್ಲಿ ಎಂ.ಜಿ.ಸೀ ಯವರ ಕಥೆಯಲ್ಲಿ ಪರಿಣಾಮಕಾರಿಯಾಗಿ ಯಶಸ್ವಿಯಾದ ಕಥೆಯಾಗಿದೆ.

ಅವರ ಅನೇಕ ಕಥೆಗಳ ಹೆಣ್ಣುಪಾತ್ರಗಲ್ಲಿ ಪ್ರಧಾನವಾಗಿ ಕಂಡುಬರುತದ್ದು, ಪರಪುರುಷ ಸಂಪರ್ಕದಿಂದ ಮಕ್ಕಳನ್ನು ಪಡೆಯುವುದು ಹಾಗೂ ಅದು ನೆನಪಿಗೆ ಒಂದಾಗ ನಾನು ನನ್ನ ಗಂಡನಿಗೆ ಮೋಸಮಾಡುತ್ತಿದ್ದೇನೆ ಎಂದು ಮರುಕವನ್ನು ವ್ಯಕ್ತಪಡಿಸುವುದು ಕಾಣುತ್ತದೆ. ಅಂತಹ ಕಥೆಗಳೆಂದರೆ ಅಳು, ಮೇದರಚನ್ನಿ, ಸುಂದರಪರಿವರ್ತನೆ, ಈ ಕಥೆಗಲ್ಲಿ ಕಾಣುತ್ತದೆ. ಅವರ ಕಥೆಗಲ್ಲಿ ಕಂಡುಬರುವ ಎಲ್ಲಾ ಸ್ತ್ರೀ ಪಾತ್ರಗಳು ಸಹ ಒಂದೇ ಮಾದರಿಯಲ್ಲಿ ಪರಿಣಾಮ ಕಡದಂತೆ ಕತೆಗಳ ರಚನೆ ಕಂಡುಬರುತ್ತದೆ. "ಅಳು', ಮೇದರಚನ್ನಿ, ಸ್ನೇಹದ ಕಾಣಿಕೆ, ಇಂತಹ ಕಥೆಗಳಲ್ಲಿ ಕಂಡುಬರುವ ಸ್ರೀಪಾತ್ರಗಳು ತಾವು ಮಾಡಿರುವ ತಪ್ಪನ್ನು ಅಳು ಮತ್ತು ಮೇದರಚನ್ನಿ ಕತೆಯಲ್ಲಿ ಬರುವ ಗಂಡಂದಿರು ಹೆಂಡತಿಯರು ಮಾಡಿರುವ ತಪ್ಪನ್ನು ಒಪ್ಪಿಕೊಂಡು ಸಂಸಾರ ಸಾಗಿಸುವಂತದ್ದು ಕಾಣುತ್ತದೆ. ಆದರೆ ಸ್ನೇಹದ ಕಾಣಿಕೆಯಲ್ಲಿ ಬರುವ ಸಾವಿತ್ರಮ್ಮನ ಮನಸ್ಸು ತಡೆಯದೇ ನನ್ನ ಈ ಮಗುವಿನ ಜನ್ಮಕ್ಕೆ ಕಾರಣರಾದವರೇ ನನಗೆ ಆಧಾರ ಎಂದು ತಿಳಿದು ಕೊನೆಗೆ ಅವಳು ಸಾಯುತ್ತಾಳೆ. ಇಂತಹ ಕಥೆಗಳು ನಮ್ಮ ಜೀವನದಲ್ಲೂ ಸಹ ಹಾಸುಹೊಕ್ಕಾಗಿ ಇರುತ್ತವೆ ಎಂಬುದನ್ನು ಕೆಲವು ಕತೆಗಳ ಮೂಲಕ ಸಾಧಿಸಿದ್ದಾರೆ.

ಅವರ ಕತೆಗಳ ಪ್ರಪಂಚದಲ್ಲಿ ನಮಗೆ ಪರಿಚಿತರಾಗುವ ಜನರು ಹಲವು ರೀತಿಗಳವರು. "ಎಂ.ವಿ.ಸೀ. ಯವರು ಇಲ್ಲಿ ಯಾವ ಒಂದು (ಧೋರಣೆಯ) ಯೋಧರೂ ಆಗದೆ, ತಮ್ಮ ಸುತ್ತಮುತ್ತಲಿನ ಜೀವನವನ್ನು ಸಹಾನುಭೂತಿಯಿಂದ ಚಿತ್ರಿಸುವ ಗುರಿಯಿಂದಲೇ ಪ್ರೇರಿತರಾಗಿರು ವುದರಿಂದ ಅವರು ಸೃಷ್ಟಿಸಿರುವ ವ್ಯಕ್ತಿಗಳು ವೈವಿದ್ಯವನ್ನೂ ಜೀವಕಳೆಯನ್ನು ಪಡೆದಿರುತ್ತಾರೆ. ಇದೇ ಕಾರಣದಿಂದ ಅವರು ಕತೆಗಳಲ್ಲಿ ವಸ್ತು ವೈವಿಧ್ಯವೂ, ಭಾವನಾ ವೈವಿಧ್ಯಾವೂ ಕಂಡುಬರುತ್ತದೆ. ಸಮಾಜದ ಯಾವ ಒಂದು ಭಾಗದ ಮೇಲೆಯೇ ಬೆಳಕು ಚಲ್ಲುವುದಾಗಲಿ, ಯಾವ ಒಂದು ಭಾವನೆಯನ್ನೇ ಕೆರಳಿಸುವುದಾಗಲಿ ಅವರ ಉದ್ದೇಶವಲ್ಲ. ಆದುದರಿಂದ ಹಲವು ಬಗೆಯ ಘಟನೆಗಳು ಕೆಲವು ಬಹಳ ಅರ್ಥಪೂರ್ಣವಲ್ಲದಿದ್ದರೂ ಆಸಕ್ತಿಯನ್ನೂಂಟು ಮಾಡುವಂತಹವು, ಕೆಲವು ಬಾಳಿನ ಗಹನತೆ ಕ್ಲಿಷ್ಟತೆಗಳನ್ನೂ ಸೂಚಿಸುವ ಪ್ರತೀಕಗಳು–ಅವರ ಕತೆಗಳ ಅಡಿಪಾಯ ವಾಗುತ್ತದೆ." ೨

ಶ್ರೀಯುತರ ಕತೆಗಳಲ್ಲಿನ ಘಟನೆಗಳಲ್ಲಿ ಕೆಲವು ಕುತೂಹಲವನ್ನುಂಟುಮಾಡುವಂತಹವು ಮಾತ್ರ, ಮತ್ತೆ ಕೆಲವು ಜೀವನದ ಗಹನತೆಯ ಸೂಚನೆಗಳು ಎಂದಾಗಲೇ ಎಲ್ಲ ಕತೆಗಳೂ ಒಂದೇ ಮಟ್ಟವನ್ನು ಮುಟ್ಟಿಲ್ಲ ಎನ್ನುವುದು ಸ್ಪಷ್ಟ.

ಅವರ ಕೆಲವು ಕಥೆಗಳು ಕುತೂಹಲವನ್ನು ಓದುಗರಲ್ಲಿ ಹಿಡಿದಿಡುವ ಶಕ್ತಿ ಕಥೆಗಾರರಲ್ಲಿ ಕಾಣುತ್ತದೆ ಅನೇಕ ಕಥೆಗಳು ಓದುಗಾರಿಗೆ ಕುತೂಹಲದಿಂದ ಓದುವಂತೆ ಮಾಡುತ್ತವೆ. ಕೊಳ್ಳಿದೆವ್ವ ಯಾವನಸುಧೆ, ಇನ್ನೂ ಮುಂತಾದ ಕಥೆಗಳಲ್ಲಿ ಕತೆಗಳೇ ಓದಿಸಿಕೊಂಡು ಹೋಗುವಂತದ್ದು ಕಾಣುತ್ತದೆ. ಓದುಗರಲ್ಲಿ ಕುತೂಹಲವನ್ನುಂಟುಮಾಡುವುದು ಅವರ ಶೈಲಿಯಾಗಿದೆ.

ಗಂಡಿನ ಹೃದಯ ಕಥೆಯು ತಂತ್ರ ಮತ್ತು ಶೈಲಿಯ ದೃಷ್ಟಿಯಿಂದ ಅತ್ಯುತ್ತಮವಾದ ಕಥೆಯಾಗಿದೆ. ಇದು 'Cosimo giorgeri contri' ಎನ್ನುವ ಇಟಾಲಿಯನ್ ಕತೆಗಾರನ ಕೃತಿಯ ಅನುವಾದ. ಕತೆಯಲ್ಲಾ ಕೆಲವು ನಿಮಿಷಗಳಲ್ಲಿ ನಡೆದುಹೋಗುತ್ತದೆ. ಹೆಂಡತಿ ಪ್ರಸವವೇದನೆಯನ್ನು ಅನುಭವಿಸುತ್ತಿರುವಾಗ ಹೊರಗೆ ಕುಳಿತಿರುತ್ತಾನೆ. ಗುಗ್ಲೀಲ್ಮೋ ತನ್ನ ಹಿಂದಿನ ಜೀವನ ಅವನ ಕಣ್ಣುಮುಂದೆ ಹಾದುಹೋಗುತ್ತದೆ. ತಾನು ಮದುವೆಯಾಗಬೇಕೆಂದಿದ್ದುದು ಅನಾಳನ್ನು ಅವಳ ಚೆಲುವೆ, ಚಾಲಿಕಿನ ರೀತಿ ಅವನ ಮನಸ್ಸನ್ನು ಸೆಳೆದಿದ್ದವು. ಆದರೆ ಅವಳು ಅವನ ಪಾಲಿಗೆ ಬರಿಯ ಭ್ರಾಂತಿ ಎಂದು ತಾಯಿ ಹೇಳಿದ್ದನದನ್ನು ನಂಬಿ, ಐರಿನಳನ್ನು ಮದುವೆಯಾದ. ಇದನ್ನು ನೆನೆಯುತ್ತಿರುವಾಗಲೇ ಆನಾ ಐರಿನಳ ಯೋಗಕ್ಷೇಮವನ್ನು ವಿಚಾರಿಸಲು ಬಂದಳು. ಎರಡು ನಿಮಿಷದ ಮಾತುಕತೆ ಅವಳೂ ಅವನನ್ನು ಒಲಿದಿದ್ದಳು ಎಂಬುದನ್ನು ತೋರಿಸಿತ್ತು. ಈ ಅರಿವಿನ ಹೊಡೆತದಿಂದ ಅವನು ಚೇತರಿಸಿಕೊಳ್ಳುವ ಮುನ್ನವೇ ಡಾಕ್ಟರ್ ಪ್ರಶ್ನೆ ಕೇಳಿದ: "ಎರಡರಲ್ಲೊಂದು ಪ್ರಾಣವನ್ನು ಮಾತ್ರ ಉಳಿಸಬಲ್ಲೆ. ತಾಯಿಯನ್ನು ಉಳಿಸಲೆ ಮಗುವನ್ನೋ? ಗುಗ್ಲೀಲ್ಮೋಗೆ ಪ್ರಪಂಚ ಗಿರ್ರೆಂದು ಸುತ್ತುವಂತೆ ತೋರಿತು. ಐರಿನಳು ಕಣ್ಣುಮುಚ್ಚಿದರೆ ಆನಾಳನ್ನು ಮದುವೆಯಾಗಬಹುದು! ಎಂತಹ ಅವಕಾಶ! ತುಟಿ ನುಡಿಯಿತು! "ತಾಯಿಯನ್ನು ಬದುಕಿಸಿ!

ಕೆಲವು ನೂರು ಪದಗಳ ಪರಿಮಿತಿಯಲ್ಲಿ ಕತೆಗಾರ ಮಾಡಿರುವ ಸಾಧನೆ ಅಚ್ಚರಿಯನ್ನುಂಟು ಮಾಡುತ್ತದೆ. ಜೀವನ ಎಷ್ಟು ವಿಸ್ಮಯಕಾರಿಯಾದದ್ದು, ಹಾಗೆಯೇ ಮನುಷ್ಯನ ಸ್ವಭಾವ ಎಂತಹ ಬಿಡಿಸಲಾರದ ಒಗಟ್ಟೆ! ತೀರ ಸಾಮಾನ್ಯವಾದ ತನ್ನನ್ನು ಆನಾಳಂತಹ ಚಲುವೆ, ಚಾಲಾಕಿನ ಮತ್ತಳಿ ಮೆಚ್ಚುವಳೆ ಎಂದು ಗೊಗ್ಲೀಲ್ಮೋಗೆ ತೋರಿದುದು ಸಹಜ. ಆದರೆ ಹೆಣ್ಣಿನ ಕಣ್ಣು ಅವನಲ್ಲಿ ಯಾವ ಒರಿಮೆಯನ್ನು ಕಂಡಿತೂ! ಅದರ ಅರಿವು ಬಂದದ್ದು ತೀರ ತಡವಾಗಿ ಎನ್ನಿಸುತ್ತದೆ. ಒರಿಮೆಯನ್ನು ಕಂಡಿತೂ! ಅದರ ಅರಿವು ಬಂದದ್ದು ತೀರ ತಡವಾಗಿ ಎನ್ನಿಸುತ್ತದೆ. ಒರಿಮೆಯನ್ನು ಕಂಡಿತೂ! ಅದರ ಅರಿವು ಒಂದದ್ದು ತೀರ ತಡವಾಗಿ ಎನ್ನಿಸುತ್ತದೆ ಅವನಿಗೆ

ಮರುಕ್ಷಣ ನೆಗೆಗಾರ ವಿಧಿ ಅವನ್ನು ಇಕ್ಕಟ್ಟಿನಲ್ಲಿ ಸಿಕ್ಕಿಸುತ್ತದೆ! ಸುಲಭವಾಗಿ ಐರೀನಳಿಂದ ಬಿಡುಗಡೆಯಾಗಿ ಆನಾಳೊಡನೆ ಬಾಳುವುದೇ ಇಲ್ಲವೆ ಕೈಹಿಡಿದ ಹೆಣ್ಣಿನ ಜೀವನವನ್ನು ಉಳಿಸುವುದೆ? ಇದು ಜೀವನದ ವಿಧಿಯ ವಿಕಟಹಾಸ್ಯ ಗುಗ್ಲೀಗ್ಮೋನ ಹೃದಯ ಮೂರ್ತಿ ಸುಖದ ದಾರಿ

ಹಿಡಿ' ಎನ್ನುತ್ತದೆ. ತುಟಿ ಹೆಂಡತಿಯನ್ನುಳಿಸಿ ಎನ್ನುತ್ತದೆ. ಎಂತಹ ವಿಚಿತ್ರ ಗುಗ್ಗೀಲ್ಮೋ ಮೂರ್ಖ ಎನ್ನುಬೇಕೆ? ಇಲ್ಲವೆ ಒಲ್ಲದ ಮನಸ್ಸಿನಿಂದ ಹೆಂಡತಿಗೆ ಪ್ರಾಣದಾನ ಮಾಡಿದವನನ್ನು ನೀತಿವಂತ ಎನ್ನಬೇಕೆ? ಕತೆಯ ಘಟನೆಗಳೆಲ್ಲ ಒಂದೇ ಸ್ಥಳದಲ್ಲಿ ಕೆಲವೇ ನಿಮಿಷಗಳಲ್ಲಿ ನಡೆದುಹೋಗುತ್ತವೆ. ಆಕಾಶದಲ್ಲಿ ಹೊಳೆಯುವ ಒಂದೊಂದು ನಕ್ಷತ್ರವೂ ನಮ್ಮ ಜಗತ್ತಿನಾಚೆ ಇರುವ ಜಗತ್ತಿನ ಭವ್ಯತೆಯೆಡೆಗೆ ದೃಷ್ಟಿ ಸೆಳೆಯುವಂತೆ ಇಲ್ಲಿ ಪ್ರತಿ ಘಟನೆಯೂ ಜೀವನ–ಮನುಷ್ಯ ಸ್ವಭಾವ ಎಣಿಕೆ ವಿವರಗಳನ್ನು ಮೀರಿದುವು ಎಂಬುದನ್ನು ನೆನಪಿಗೆ ತರುತ್ತದೆ. ಉತ್ತಮ ಕತೆಗಾರನಿಗೆ ಎರಡು ವರಗಳು ಅಗತ್ಯವಾಗಿ ಬೇಕು ಮೊದಲನೆಯದು ಸುತ್ತಲಿನ ಪ್ರಪಂಚದಲ್ಲಿ ಯಾವುದನ್ನು ಅಸಡ್ಡೆಯಿಂದ ಕಾಣದೆ, ಪ್ರತಿ. ವಸ್ತು–ವ್ಯಕ್ತಿಯ ಒಳಹೊಕ್ಕು ಹೃದಯವನ್ನರಿಯುವ ಶಕ್ತಿ, ಎರಡನೆಯದು ಪಕ್ಷಪಾತವಿಲ್ಲದೆ ಸಹಾನುಭೂತಿ ಈ ಎರಡು ವರಗಳೂ ಸಿತಾರಾಮಯ್ಯನವರಿಗೆ ಸಿದ್ಧಿಸಿವೆ. ಇವುಗಳ ಜೊತೆಗೆ ಸರಳ ಸುಂದರವಾದ ಶೈಲಿಯೂ ಅವರದಾಗಿದೆ. ಇತ್ತೀಚೆಗೆ ಪ್ರಕಟವಾಗುತ್ತಿರುವ ಕತೆಗಳನ್ನು ನೋಡಿದರೆ ಬರಹಗಾರನು ಶೈಲಿಗೆ ತಕಾ ಪ್ರಾಮುಖ್ಯತೆ ಕೊಡುತ್ತಿಲ್ಲ ಎನ್ನುವುದು ಎದ್ದು ಕಾಣುತ್ತದೆ. ಶೈಲಿ ಕತೆಯ ನಿರೂಪಣೆಯಲ್ಲಿ ಒಂದು ಮುಖ್ಯ ಅಂಶ ಎನ್ನುವುದು ಬರಹಗಾರನ ನೆನಪಿನಲ್ಲಿ ಉಳಿದಂತೆ ಕಾಣುವುದಿಲ್ಲ.

**ತಂತ್ರ:**

ಎಂ.ವಿ.ಸೀಯವರ ಸಣ್ಣಕತೆಗಳಲ್ಲಿ ವಸ್ತುವೈವಿಧ್ಯವನ್ನು ಗುರುತಿಸುವಂತೆಯೇ ತಂತ್ರ ವೈವಿಧ್ಯವನ್ನೂ ಗುರುತಿಸಬಹುದು. ಅವರ ಸಹಜಾಭಿವ್ಯಕ್ತಿಯನ್ನು ಪಡೆದುಕೊಂಡು ನೂತನ ತಂತ್ರಗಳಿಂದಾಗಿ ಕೆಲವು ಕತೆಗಳು ಯಸಸ್ವಿಯನ್ನು ಪಡೆದರೆ ಮತ್ತೆ ಕೆಲವು ಯಶಸ್ವಿಗಳಿಸಲಿಲ್ಲ.

ವಸ್ತುವೊಂದನ್ನು ಅಭಿವ್ಯಕ್ತಿಸುವ ರೀತಿಯನ್ನು ತಂತ್ರವೆಂದು ಕರೆಯಬಹುದು. ಅವರು ಸಾಮಾನ್ಯ ವಸ್ತುವೊಂದನ್ನು ಹೇಗೆ ಅದಕ್ಕೆ ಆಕಾರ ಕೊಡಬಲ್ಲರೆಂದು ತಿಳಿಯುವುದು ಅವರ ಅಭಿವ್ಯಕ್ತಿ ಕ್ರಮದಲ್ಲಿ ಇರುತ್ತದೆ. ಅವರ ಮೊಡದ ದಿಬ್ಬಣದ ಅಭಿವ್ಯಕ್ತಿ ಕ್ರಮ ಉತ್ತಮವಾಗಿದೆ. ಕತೆಯಲ್ಲಿ ಕತೆಗಾರನ ಕಲ್ಪನೆಯ ಮೂಲಕ ಕೆಲವು ಘಟನೆಗಳನ್ನು ಗುರುಸಿಸಬಹುದು. ಕರಿಯ ಕಥಾ ನಾಯಕ ಅವನ ಆಲೋಚನಾ ಕ್ರಮ ಹಾಗೂ ಅವನು ಮರದಡಿಯಲ್ಲಿ ಮಲಗಿ ಕನಸ್ಸಿನಲ್ಲಿ ಗೌರಿಯ ರೂಪವನ್ನು ಕಾಣುವುದು ಅದಕ್ಕೆ ಸರಿಯಾಗಿ ಕರಿಯನ ಮುಂದೆ ಹಾದು ಹೋಗುವಂತದ್ದು ಅತ್ಯಂತ ಸುಂದರವಾಗಿ ಚಿತ್ರಣಗೊಂಡಿದೆ.

'ಮೋಡದ ದಿಬ್ಬಣ' ಇದನ್ನು ಕಥೆ ಎನ್ನುವುದಕ್ಕಿಂತ ಒಂದು ಗದ್ಯಕವನವೆನ್ನುವುದು ಉಚಿತ. ಇಲ್ಲಿ ಭಾವಪ್ರಧಾನವಾಗಿರುವ ಒಂದು ಸನ್ನಿವೇಶವನ್ನು ಕವಿಗಳು ಚಿತ್ರಿಸಿದ್ದಾರೆ. ಇಲ್ಲಿ ಕಾಣುವುದು ಕತೆಗಾರರಲ್ಲ–ಕವಿ ಎಂ.ವಿ.ಸೀ ಮೋಡವನ್ನು ನೋಡುತ್ತಾ–ನೋಡುತ್ತಾ ಕರಿಯನು ಕಾಣುವ ಕನಸು–ಹಗಲಗನಸು ಬಲು ಸವಿಯಾದದು, ಬಾನಿನ ಅಗಲಕ್ಕೂ ಹರಡಿರುವ ಮುಗಿಲ ಮುಂದೆ ಅವನಿಗೆ–ತನ್ನ ಸ್ವಂತದ ಕುರಿಮಂದೆಯಾಗುತ್ತದೆ. ತನ್ನ ಜೊತೆ ಕೈಹಿಡಿದ ಹೆಂಡತಿ–ಗೌಡರ ಮಗಳು ಗೌರಿ. ಈ ಮನಸ್ಸಿನ ಮಾಟದ ಮೋಡಿಯಲ್ಲಿ ಬೆರಗಾಗಿ ಎಚ್ಚೆತ್ತರೆ ಅವನಿಗೆ

ಕಾಣುವುದೇನು? ಅತಿ ವ್ಯಕಿರಿಕ್ತವಾದ ವಾಸ್ತುವ ಸ್ಥಿತಿಗತಿಗಳು ತಾನು ಕೇವಲ ಕುರಿಕಾಯುವ ಹೈದ.

ಆದರೆ ಅವನಿಗೆ ಒಂದು ನೆನಪಿತ್ತು. ಬಾಲ್ಯದಲ್ಲಿ ಗೌರಿಯೊಡನೆ ತಾನು ಆಟವಾಡಿದವನು. ಈಗ ಬೆಳೆದ ಮೇಲೆ ಗೌರಿ ತನ್ನ ಬಳಿಗೆ ಸುಳಿಯದಿದ್ದರೂ ಹಿಂದಿನ ಸಂಗತಿಯನ್ನು ಅವಳೂ ಮರೆತಿರಲಿಕ್ಕಿಲ್ಲ. ಅವನಿಗೆ ತಾನು ಸೇವಂತಿಗೆ ಹೂಗಳನ್ನು ತಂದು ಚಿನ್ನದ ಓಡವೆಯೆಂದು ಕೊಟ್ಟಿರಲಿಲ್ಲವೆ? ನಾಗರೀಕನಂತೆ ಹೆಚ್ಚುಸ್ವಾತಂತ್ರ್ಯ ವಹಿಸಿರಲಿಲ್ಲ ನಿಜ. ಆದರೆ ಪ್ರೇಮದ ಸೂಚನೆ ದೊರೆತಿರಲಿಲ್ಲವೆ. ಗೌರಿಗೆ? ಗೌರಿಗೆ ಮದುವೆಯಾಯಿತು ಗಂಡನ ಮನೆಗೆ ದಿಬ್ಬಣ ಹೋದಳು. ಕರಿಯಮಾತ್ರ ಹುಲ್ಲುಗಾವಲಿನಲ್ಲಿ ಮಲಗಿ ನಿದ್ದೆಯಲ್ಲಿ ಮುಳುಗಿದ್ದನು. ಎದ್ದಾಗ ಮತ್ತೆ ದಿಬ್ಬಣ ಕಂಡಿತು. ಪುನಃ ಹಗಲುಗನಸು ಕಂಡ ಮುಗಿಲೆಲ್ಲ ಕುರಿಮಂದೆಯಾಯಿತು. ಆದರೆ ಕೈಹಿಡಿದ ಹೆಂಡತಿ ಬಳಿಯಿರಲಿಲ್ಲ. ಇದು ಈ ಗದ್ಯಚಿತ್ರದ ಸೂಕ್ಷ್ಮ-ಸ್ವರೂಪ ಇಲ್ಲಿ ಪರಸ್ಪರ ಪ್ರೇಮವಿಟ್ಟಿದ್ದ ಎಳೆಯರನ್ನು ವಿಧಿ ಬೇರೆ ಬೇರೆ ಮಾಡಿಬಿಡುತ್ತದೆ, ಗೌಡರಾಗಲಿ, ಕರಿಯನಾಗಲಿ, ಗೌರಿಯನ್ನು ಕರೆಸಿ ಕೇಳಿದ್ದರೆ ಏನಾಗುತ್ತಿತ್ತೆನ್ನುವುದು ಊಹೆಗೆ ಬಿಟ್ಟಮಾತಾಗಿದೆ. ಇದು ಕಥೆಯಲ್ಲದಿದ್ದರೂ ರಸಮಯವಾದ ಒಂದು ಭಾವಚಿತ್ರದಂತಿದೆ.

ಹಾಗೆಯೇ ಮತ್ತೊಂದು ಕಥೆ "ಹಾದಿಯಚಲುವೆ' ಈ ಕಥೆಯ ತಂತ್ರದ ದೃಷ್ಟಿಯಿಂದ ನೋಡಿದರೆ ವಾಗೀಶಾಚಾರ್ಯ ಮತ್ತು ಅವನ ಗೆಳೆಯನ ನಡುವೆ ದಾರಿಯಲ್ಲಿ ಹೋಗುವಾಗ ಒಂದು ಸುಂದರವಾದ ಹೆಣ್ಣೊಂದನ್ನು ನೋಡಿ ಆ ಹೆಣ್ಣಿನ ಅಂಗಸಾಷ್ಟವನ್ನು ಅಶ್ಲೀಲವಿಲ್ಲದೇ ಹೇಳುತ್ತಾನೆ, ಹೀಗೆ ನಡೆದುಕೊಂಡು ಮಾತನಾಡುತ್ತಾ ಹೋಗುವಾಗ ಕೊನೆಯಲ್ಲಿ ಕತೆ ಹೇಳುತ್ತಿದ್ದವನು ವಾಗೀಶಾಚಾರ್ಯ ಅಲ್ಲಿ ಹೋಗುತ್ತಿರುವುದು ಬೇರೆ ಯಾರೂ ಅಲ್ಲ ಅವಳು ನನ್ನ ಹೆಂಡತಿಯೇ ಕಣಯ್ಯ ಎಂದು ಹೇಳಿದಾಗ ವಾಗೀಶ ಅಲ್ಲಿಂದ ಮಾಯವಾಗುತ್ತಾನೆ. ಇಲ್ಲಿ ಕತೆಯ ನಿರೂಪಕನ ತಂತ್ರದಿಂದ ಕತೆಸಾಗುವುದನ್ನು ಗಮನಿಸಬಹುದು. ಇಂತಹದೊಂದು ಕಥೆ 'ಗೌರಿಯಸಾವು' ನಿಜವಾಗಿಯೂ ಕತೆಯೇ ಅಲ್ಲ. ಇಲ್ಲಿ ಪ್ರಾಣಿಗಳ ಮೇಲಿನ ಪ್ರೇಮವು ಭಾವತಿರೇಕಕ್ಕೆ ಹೋದಂತೆ ಚಿತ್ರಗೊಂಡು ಕತೆಗೆ ಕಳಂಕ ಬಂದಂತಾಗಿದೆ. ಆದರೆ ಈ ಕತೆಯಲ್ಲಿರುವ ಒಂದು ಗುಣವನ್ನು ಅಥವಾ ತಂತ್ರವನ್ನು ಮರೆಯುವ ಹಾಗಿಲ್ಲ ಗೌರಿ ಎನ್ನುವುದು ಒಂದು ಪ್ರಾಣಿಯೆನ್ನುವುದು ಗೊತ್ತಾಗುವ ತನಕ ಅದೊಂದು ವ್ಯಕ್ತಿಯ ಹೆಸರೆಂಬ ಭ್ರಮೆ.

ಮನುಷ್ಯನ ಮನಸ್ಸಿನ ಏರಿಳಿತಗಳನ್ನು ಸೂಚಿಸುವ ಒಂದು ಅತ್ಯುತ್ತಮ ಕಥೆಯಂದರೆ ಹುಚ್ಚನ ಹಂಬಲ. ಅಳು ಇವು ಮನುಷ್ಯನ ಭಾವನೆಗಳಿಗೆ ಸಂಬಂಧಿಸಿದ ಕಥೆ. "ಹುಚ್ಚನ ಹಂಬಲ' ಈ ಕಥೆಯ ನಾಯಕ ರಂಗಸ್ವಾಮಿ ಮದುವೆಯ ಬಗ್ಗೆ ಸುಂದರ ಕಲ್ಪನೆಗಳನ್ನು ಇಟ್ಟುಕೊಂಡಿದ್ದನ್ನು. ಇಲ್ಲಿ ರಂಸ್ವಾಮಿಯ ಭಾವನೆಗಳು ಹೆಂಡತಿಯ ಮೇಲೆ ಅಪಾರವಾದ ಪ್ರೇಮ, ತನ್ನ ತಂದೆ ತಾಯಿಯ ಎದುರಿಗೆ ಹೆಂಡತಿಯನ್ನು ಹಿಡಿದುಕೊಳ್ಳಲು ಪ್ರಯತ್ನಿಸುತ್ತಾನೆ. ಅದು ಅವನ ಗುಣಗಳನ್ನು ಚಿತ್ರಿಸುತ್ತದೆ. ಅವನಲ್ಲಿ ಪ್ರೀತಿ ಒಂದು ವಿಕಾರರೂಪವನ್ನು ತಾಳಿರುತ್ತದೆ. ಅದು ಅವನನ್ನು

ಉದ್ದೇಶದ ಸ್ಥಿತಿಗೆ ತಲುಪಿಸಿರುತ್ತದೆ. ಇಲ್ಲಿ ಅವನ ಉನ್ಮಾದವಾದ ಸ್ಥೀತಿಯನ್ನು ತಲುಪಿರುತ್ತಾನೆ. ಅವನ ಹೆಂಡತಿ ಚನ್ನಕ್ಕ ಇವನ ಹಂಬಲವನ್ನು ಸಹಿಸಲಾರದೆ ನಾನು ಇವನಿಂದ ದೂರವಾದರೆ ಇವನ ಹುಚ್ಚು ಸರಿಯಾಗಬಹುದು ಎಂದು ಸಾಯುತ್ತಾಳೆ. ರಂಗಸ್ವಾಮಿಗೆ ಹುಚ್ಚು ಇನ್ನೂ ಹೆಚ್ಚಾಗಿ ಅವನನ್ನು ಹುಚ್ಚರ ಆಸ್ಪತ್ರೆ (ನಿಮಾನ್ಸ್)ಗೆ ಸೇರಿಸುತ್ತಾರೆ. ಆದರೆ ಎರಡು ವರ್ಷದ ನಂತರ ಅವನ ಹುಚ್ಚು ವಾಸಿಯಾಗಿ ಅವನೂ ಬೇರೆ ಮದುವೆಯಾಗದೇ ತನ್ನ ಹೆಂಡತಿ ಚನ್ನಕ್ಕನ ನೆನಪಿನಲ್ಲಿ ಅವನು ಬದುಕು ಸಾಗಿಸುವಂತದ್ದು, ಇದು ಮನಸ್ಸಿಗೆ ಸಂಬಂಧಿಸಿದ ಕಥೆಯಾಗಿದೆ ಇದು ಮನಃಶಾಸ್ತ್ರೀಯ ದೃಷ್ಟಿಯಿಂದ ಅಭ್ಯಾಸಮಾಡಲು ಯೋಗ್ಯವಾದ ಕಥೆ.

ಪರಿಸರವನ್ನು ಅಥವಾ ಮನುಷ್ಯನ ಸ್ವಭಾವವನ್ನು ಒಂದು ಸಂಪ್ರದಾಯ ಒಂದು ಆಚರಣೆಯನ್ನು ಚಿತ್ರಿಸಿ, ಮೊದಲು ಕೆಲವು ಪಾತ್ರಗಳ ವೀಕ್ಷಣೆಯ ಮೂಲಕ ಚಿತ್ರಿಸಿ ನಂತರ ಅವುಗಳ ನೈಜ ಸ್ವರೂಪವನ್ನು ಅಥವಾ ಸತ್ಯವನ್ನು ತೋರಿಸಿ ಓದುಗರ ಮೇಲೆ ಪರಿಸಣಾಮವನ್ನು ಬೀರುವಂತದ್ದು. ಅವರ ಕಥೆಗಳಲ್ಲಿ ರಸದ ದೃಷ್ಟಿಯಿಂದ ನೋಡುವುದಾದರೆ ಕುರುಣ ರಸಕ್ಕೆ ಅವರು ಹೆಚ್ಚು ಒತ್ತು ಕೊಡುತ್ತಾರೆ. ಆದ್ದರಿಂದ ಅವರ ಕಥೆಗಳಲ್ಲಿ ಮನುಷ್ಯ-ಮನುಷ್ಯನಲ್ಲಿ ಅನುಕಂಪ, ದಯ,ಕರುಣಾಭಾವನೆ ಉಳ್ಳುವನಾಗಿರಬೇಕು ಎಂದು ಚಿತ್ರಿಸಿದ್ದಾರೆ.

ಎಂ.ವಿ.ಸೀರವರ ಕೆಲವು ಕಥೆಗಳಲ್ಲಿ ಪ್ರಥಮ ಪುರುಷದಲ್ಲಿ ಮೊದ-ಮೊದಲಾಗುವ ಕಥೆಗಳೇ ಹೆಚ್ಚು. ಇವುಗಳಲೆಲ್ಲಾ ಹೇಗೋ ಅನಿರೀಕ್ಷಿತವಾಗಿ ಕತೆಗಾರರ ಆತ್ಮಚರಿತ್ರೆಯೂ ಚಿತ್ರಗೊಂಡಿದೆ. ಸೂಕ್ಷ್ಮವಾಗಿ ಪರಿಶೀಲಿಸಿದರೆ ನೂರನಲವತ್ತೆರಡುರಲ್ಲಿ ಬರುವ "ನಾನು' ಎಂಬುವವರ ವಿವರಣೆ "ಸುಂದರ ಪರಿವರ್ತನೆ' ರಾಮುವಿನ ಚಿತ್ರ, ತಂತಿಕಿತ್ತಪಿಟೀಲಿನ "ನಾನು'ವಿನ ಸಂಗೀತ-ಪ್ರೇಮ, ಚೂಟುದ್ದದ ಹುಡುಗನಲ್ಲಿ ಬರುವ "ನಾನು' ಇವುಗಳೆಲ್ಲ ಒಟ್ಟು ಸೇರಿದರೆ ಕತೆಗಾರರ ಒಂದು ಸ್ಥೂಲಚಿತ್ರ ನಮಗೆ ಕಂಡುಬರುತ್ತದೆ. ಬಹುಶಃ ಈ ಚಿತ್ರವನ್ನು ಕೊಡಬೇಕೆನ್ನುವುದು ಕಥೆಗರಾರ ಅಶೆಯವಲ್ಲ "ನಾನು' ಎಂದು ಮೊದಲು ಮಾಡುವುದರಲ್ಲಿ ಕೆಲವು ಅನುಕೂಲಗಳಿವೆ. ಇವನ್ನೆಲ್ಲ ಎಂ.ವಿ.ಸೀ ಯವರು ಸರಿಯಾಗಿ ಉಪಯೋಗಿಸಿಕೊಂಡಿದ್ದಾರೆ.

ಅವರು ಹಲವು ಕತೆಗಳಲ್ಲಿ ಎಂದೋ ನಡೆದ ಸಂಗತಿಯನ್ನು ಯಾರೋ ಅವರ ಗೆಳೆಯನಿಗೂ ಆಪ್ತರಿಗೂ ಹೇಳಿದ ರೀತಿಯಲ್ಲಿ ಅವರ ಕಥೆಗಳು ಕಂಡುಬರುತ್ತವೆ. ಕೆಲವು ಕಥೆಗಳಲ್ಲಿ ಕಥೆ ಹೇಳುವವನ ಹೆಸರು ಪ್ರಸ್ಥಾಪವಾಗವುದಿಲ್ಲ. ಇನ್ನೂ ಕೆಲವು ಕತೆಗಳು "ಪ್ಲಾಶ್‌ಬ್ಯಾಕ್' ತಂತ್ರವನ್ನು ಅಳವಡಿಸಿದಂತಹ ಕತೆಗಳು ಕಾಣುತ್ತವೆ, ಉದಾ:- ನಿಲ್ದಾಣಗಳ ನಡುವೆಈ ಕಥೆ ಒಂದು ರೈಲಿನಲ್ಲಿ ಘಟಿಸಬಹುದಾದ ಘಟನೆಯಾದರೂ ಅದರ ತಂತ್ರ ವಿಶೇಷವಾದದ್ದು. ಎಂ.ವಿ.ಸೀಯವರು ಕನ್ನಡ ಕಥಾ ಸಾಹಿತ್ಯದಲ್ಲಿ ಶ್ರೇಷ್ಟಕತೆಗಾರ ಎನಿಸಿಕೊಳ್ಳದಿದ್ದರೂ, ಅವರ ಕೆಲವು ಪ್ರಮುಖ ಕತೆಗಳೆಂದರೆ ಮುರಿದಗಣಿ, ಅಳು, ಮೇದರಚನ್ನಿ, ಸುಂದರಪರಿವರ್ತನೆ, ದೃಷ್ಟಿಲಾಭ ಕತೆಗಳು ತಂತ್ರದ ದೃಷ್ಟಿಯಿಂದ ಅತ್ಯುತ್ತಮ ಕಥೆಗಳಗಿವೆ.

**ಭಾಷೆ**

ಎಂ.ವಿ.ಸೀಯವರು ತಮ್ಮ ಕಥೆಗಳಲ್ಲಿ ಬಳಸಿಕೊಂಡಿರುವ ಭಾಷೆ ಮಾಸ್ತಿಯವರನ್ನು ಪ್ರಧಾನವಾಗಿ ಅನುಸರಿಸಿರುವುದು ಕಂಡುಬರುತ್ತದೆ. ಅವರಲ್ಲಿ ಶಿಷ್ಟ ಭಾಷೆಯ ಪ್ರಯೋಗ ಮಾಡದೇ, ಅವರು ಜನಪದ ಭಾಷೆಯನ್ನು ಉಳಿಸಿಕೊಳ್ಳದೇ ಅಂದಿನ ಕಾಲದಲ್ಲಿ ಹಳೆಯ ಮೈಸೂರಿನಲ್ಲಿ ಒಂದು ಉನ್ನತ ಸಮುದಾಯ ಎಂದರೆ ಒಂದು ಸಂಸ್ಕಾರ ಉಳ್ಳ ಕುಟುಂಬದವರು ಮಾತನಾಡುವ ಭಾಷೆಯನ್ನು ಅವರು ಕಥೆಗಳಲ್ಲಿ ಬಳಸಿದ್ದಾರೆ. ಅವರ ಕಥೆಗಳಲ್ಲಿ ಮೈಸೂರಿನಲ್ಲಿ ಒಕ್ಕಲಿಗ ಸಮುದಾಯದವರು ಮಾತನಾಡುತ್ತಿದ್ದ ಭಾಷೆಯನ್ನು ಒಳಸಿಕೊಂಡಿದ್ದಾರೆ. ಅಂದರೆ ೧೯೪೦ರ ಘಟ್ಟದಲ್ಲಿ ಆ ಸಮುದಾಯದವರು ಮಾತನಾಡುತ್ತಿದ್ದ ಭಾಷೆಯನ್ನು ಬಳಸಿಕೊಂಡಿದ್ದಾರೆ.

ಅವರ ಸಣ್ಣಕತೆಗಲ್ಲಿ ಬಳಸಿರುವಂತಹದ್ದು ಸರಳವಾದ ಭಾಷೆಯಾಗಿದೆ. ಅವರ ಭಾಷೆ ಓದುಗರಿಗೆ ಸರಾಗವಾಗಿ ಅರ್ಥವಾಗುವ ರೀತಿಯಲ್ಲಿ ಭಾಷೆಯ ಬಳಕೆ ಕಂಡುಬರುತ್ತದೆ. ಎಂ.ವಿ.ಸೀಯವರು ಹೇಳಬೇಕಾಗಿರುವುದನ್ನು ನೇರವಾಗಿ ಹೇಳುವಂತದ್ದನ್ನು ಗುರುತಿಸಿಸಬಹುದು. ಅವರು ಆಯಾ ಕತೆಗಳಿಗೆ ಹೊಂದಿಕೆಯಾಗುವಂತಹ ಪದಪ್ರಯೋಗ ಹಾಗೂ ವಾಕ್ಯರಚನೆ ಕಂಡುಬರುತ್ತದೆ. ಅವರು ಬಳಸಿರುವ ಭಾಷೆ ಇಂದು ನಮಗೆ ರುಚಿಸದೇ ಇರಬಹುದು ಆದರೆ ಅಂದು ಅದಕ್ಕೆ ಉನ್ನತಸ್ಥಾನವಿತ್ತು ಅವರ ಕಥೆಗಳಲ್ಲಿ ನುಡಿಗಟ್ಟುಗಳು, ಗಾದೆಗಳ ಬಳಕೆಮಾಡಿರು ವಂತದ್ದನ್ನು ಕಂಡುಬರುತ್ತದೆ.

ಅವರ ಕಥೆಗಳಲ್ಲಿ ಬಳಕೆ ಮಾಡಿರುವ ಭಾಷೆಯನ್ನು ಕೆಲವು ಉದಾಹರಣೆ ಮೂಲಕ ನಿರುಪಿಸಲಾಗಿದೆ. ಬೂಟ್ ಪಾಲೀಷ್ ಹಾಕಿ ಬದುಕುವ ಒಬ್ಬ ಸಾಮಾನ್ಯ ಹುಡುಗ ಆಡುವ ಮಾತು "ನಿಮ್ಮ ಸೂಟಿಗೂ ಜೋಡಿಗೂ ಒಪ್ಪೊದಿಲ್ಲ ಸಾರ್" ನಿಮ್ಮ ಜೋಡು ಜರ್–ಜಪ್ ಅಂತ ಮಿರ್ ಮಿರ ಮಿರುಗುತ್ತಾ ಇದ್ದರೆ ಎಲ್ಲರ ಕಣ್ಣು ನಿಮ್ಮ ಕಾಲ ಕಡೆಗೆ ಇರಬೇಡವಾ?"–೩

ಜೋಡು ರಿಪೇರಿ ಮಾಡಿಸಿಕೊಳ್ಳಿ ಸಾರ್ ತನ್ನಿಸಾರ್ ನಿಮಗಾಗದಿದ್ದರೆ ನಾನು ರಿಪೇರಿ ಮಾಡಿಸಿಕೊಡುತ್ತೇನೆ. ನೀವೇನು ಕಾಸು ಕೊಡಬೇಡಿ, ಏನೂ ಕೊಡಬೇಡಿ, ಹಾಗೆ ಪಾಲೀಸ್ ಹಾಕಿಸಿಕೊಡುತ್ತೇನೆ. ನಾನು ಸಾಯುವವರೆಗೂ ಪಾಲೀಸ್ ಹಾಕಿ ಕೊಟ್ಟು ತೀರಿಸಿದರೂ ಸಾಲ ತೀರದಷ್ಟು ಕೂಲಿ ಕೊಟ್ಟು ಜಿಟ್ಟಿದ್ದೀರಿ ನೀವು ನಿಮ್ಮಂಥವರ ಪಾದ ಸೇವೆ ಮಾಡಿದರೆ ನಮಗೂ ಪುಣ್ಯ ಬರುತ್ತೆ. ಈ ಕಥೆಯಲ್ಲಿ ಬೂಟ್ ಪಾಲೀಶ್ ಹುಡುಗ ವಯಸ್ಸಿನಲ್ಲಿ ಕಿರಿಯವನಾದರೂ ಅವನ ಮಾತು ಅನುಭವದ ಮಾತಾಗಿದೆ.

ಕೊಳ್ಳಿದೆವ್ವದ ಕಥೆಯಲ್ಲಿ ಭಾಷೆ ಈ ರೀತಿ ಬಳಸಿಕೊಂಡಿದ್ದಾರೆ "ಇದೇನು ಡೆಪ್ಯೂಟಿ ಕಮೀಷನವರ ಕಛೇರಿ ಅಂತ ತಿಳಿದುಕೊಂಡಿರಾ? ಇದು ಆಸ್ಪತ್ರೆ, ನಿಮಗೇನಾಗಬೇಕು ಅನ್ನೂದಿದ್ದರೆ ಅಲ್ಲಿಗೆ ಹೋಗಿ, ನಿಮಗೇನಾಗಿದೆ ಅನ್ನೂದಿದ್ರೆ ಇಲ್ಲಿ ಹೇಳಿಕೊಳ್ಳಿ ಹ್ಞೂ ಏನಾಗಿದೆ ನಿಮಗೆ" ?

ಏನೂ ಇಲ್ಲ......................ಹ್ಞ, ಹ್ಞ, ಹ್ಞ....................................."

"ಏನೂ ಇಲ್ದೆ ಹೋದರೆ ಮತ್ತೆ ಇಲ್ಲಿಗೆ ಯಾಕೆ ಬಂದಿರಿ? ಏನಾದರೂ ದಾರಿ ತಪ್ಪುಬಂದಿರೋ?"

"ಇಲ್ಲ ಇಲ್ಲಿಗೇ ಒಂದೆ ಅವರನ್ನು..........................ಎಂದು ಮತ್ತೆ ಸಣ್ಣಪ್ಪನವರು ಮುದಿರೋಗಿಯ ಕಡೆ

ಮುಖತಿರುಗಿಸಿದರು. ಈ ವಾಕ್ಯಗಳು ಕೊಳ್ಳಿದೆವ್ವದ ಕತೆಯಲ್ಲಿ ಸಣ್ಣಪ್ಪನವರು ಮತ್ತು ವೈದ್ಯರ ನಡುವೆ ಸಂಭಾಷಣೆ ನಡೆಯುವಂತಹದ್ದು.

'ನಿಲ್ದಾಣಗಳ ನಡುವೆ' ಕತೆಯಲ್ಲಿ ಎಂ.ವಿ.ಸೀ.ಯವರು ಮುಸ್ಲಿಂರು ಸಹಜವಾಗಿ ಮಾತನಾಡುವ ಭಾಷೆಯನ್ನು ಸ್ವಾರಸ್ಯ ಕೆಡದ ಹಾಗೆ ನಿರೂಪಿಸುತ್ತಾರೆ. "ಆವೋ, ಅಂದರ್ ಆವೋ, ಬೈಠೂ, ಪರ್ವಾನೈ" ಎಂದು ವಯಸ್ಕನ ಧ್ವನಿ ಆಹ್ವಾನ ನೀಡಿತು.

"ಪರ್ವಾ ಇಲ್ಲ, ಬನ್ನಿ ಸಾರ್, ನಾವೇನೂ ಸೀಟ್ ರಿಸರ್ವ ಮಾಡಿಸಿಲ್ಲ" ಎಂದು ಅಚ್ಚ ಕನ್ನಡದಲ್ಲೇ ಕರೆಯುತ್ತ ಮುಸ್ಲಿಂಯುವಕ ಇಲ್ಲಿ ರೆಡೂ ವಾಕ್ಯಗಳ ಅರ್ಥಒಂದೇ ಆದರೆ ವಯಸ್ಯನ ಬಾಯಲ್ಲಿ ಅವನ ಮಾತೃಭಾಷೆ ಮಾತನಾಡಿದರೆ ಆದರೆ ಮುಸ್ಲಿಂಯುವಕ ಕನ್ನಡದಲ್ಲೇ ಆ ವಯಸ್ಕನನ್ನು ಮಾತನಾಡಿಸುವಂತಹದ್ದು ತುಂಬಾ ಅರ್ಥಗರ್ಭಿತವಾಗಿದೆ.

ನಂತರ ವಯಸ್ಕ 'ಸಂಸ್ಕಾರ, ಸಂಸಾರ: ಹ ಹ್ಹಹಾ! ಅವರು ಯಾರೋ ನಾವು ಯಾರೋ" ಎಂದು ಉರ್ದು ಕನ್ನಡ ಬೆರೆಸಿ ಮಾತನಾಡಿದ ಹೀಗೆ ವಯಸ್ಕ ಮಾತು ಮುಂದುವರಿಸಿ ನಿರೂಪಕ ಕೇಳಿದ ಪ್ರಶ್ನೆಗೆ ಅವನು ಈ ರೀತಿ ಮಾತನಾಡುತ್ತಾನೆ "ಮಾಫ್ ಮಾಡ್ಬೇಕು, ಕನ್ನಡ ಮಾತಾಡಿ ಬೀಸ್ ವರ್ಷ ಆಯ್ತು......................ನಾನು ಕನ್ನಡ ಮಾತಾಡೋಕೆ ಶುರುಕರ್.............. ..................ಮಾಡಿದ್ರೆ, ರೈಲು ಕಂಬಿ ತಪ್ಪಿಬಿಡುತ್ತದೆ.............................ಹೌದೋ ಅಲ್ಲವೋ? ವಯಸ್ಕ ಮುಸ್ಲಿಂ ಯುವಕನ ಮುಖ ನೋಡುತ್ತಾ, ನಗುತ್ತಾ ನುಡಿದ. ಹೀಗೆ ಈ ಕತೆಯಲ್ಲಿ ಒಬ್ಬ ಮುಸ್ಲಿಂ ವ್ಯಕ್ತಿಯಾಗಿದ್ದರೂ ಅವನಿಗೆ ಕನ್ನಡದ ಮೇಲೆ ಅಸಾರವಾದ ಗೌರವವನ್ನು ಸೂಚಿಸುವಂತೆ ಕಂಡುಬರುತ್ತದೆ

**ಗಾದೆಗಳ ಬಳಕೆ:**

ಎಂ.ವಿ.ಸೀಯವರ ಕಥೆಗಳಲ್ಲಿ ಪ್ರಧಾನವಾಗಿ ಗಾದೆಗಳ ಬಳಕೆಮಾಡಿರುವಂತಹದ್ದು ಕಂಡುಬರುತ್ತದೆ.

ಗಾದೆಗಳು ಮನುಷ್ಯನಿಗೆ ಅನುಭವದಿಂದ ಬಂದ ಮಾತುಗಳಾಗಿವೆ.

೧. ಕುಂಬಾರನಿಗೆ ಒಂದು ವರುಷ, ದೊಣ್ಣೆಗೆ ಒಂದು ನಿಮಿಷ, ಎನ್ನುವಂತೆ

೨. ಹೆತ್ತವರಿಗೆ ಹೆಗ್ಗಣಮುದ್ದು

೩. ಕುಳಿತು ಉಂಬುವನಿಗೆ ಕುಡಿಕೆ ಸಾಲದು

೪. ಹಾಲು ಕುಡಿದ ಮಕ್ಕಳು ಬದುಕುವುದಿಲ್ಲ, ನೀರು ಕುಡಿದ ಮಕ್ಕಳು ಬದುಕುತ್ತವೆಯೋ

೫. "ಬಣ್ಣ ಸಾವಿರ ಡೊಂಕು ಮುಚ್ಚಿತು"

೬. "ಹಾಲಿನ ಗಳಿಕೆ ಹಗ್ಗವಾದರೆ ನೀರಿನ ಗಳಿಕೆ ಮುಪ್ಪಾಗ"

೭. "ಮನೆಕಟ್ಟಿನೋಡು, ಮದುವೆ ಮಾಡಿನೊಡು"

೮. "ರೋಗಿಬಯಸಿದ್ದು ಹಾಲನ್ನ, ವೈದ್ಯರು ಹೇಳಿದ್ದು ಹಾಲನ್ನ"

೯. "ಕೆಟ್ಟಮೇಲೆ ಬುದ್ದಿಬಂತು: ಅಟ್ಟ ಮೇಲೆ ಒಲೆ ಉರಿಯಿತು"

ಎಂ.ವಿ.ಸೀಯವರು ಬಹುತೇಕ ಎಲ್ಲ ಕಥೆಗಲ್ಲೂ ೧೯೪೦-೫೦ರ ಆಸುಪಾಸಿನಲ್ಲಿ ಹಳೆಯ ಮೈಸೂರು ಪ್ರಾಂತ್ಯದಲ್ಲಿ ಒಂದು ಸಂಸ್ಕಾರದಿಂದ ಕೂಡಿದ ಕುಟುಂಬದವರು ಬಳಕೆಮಾಡುವ ಭಾಷೆಯನ್ನು ಅವರ ಕತೆಗಳಲ್ಲಿ ಕಂಡುಬರುತ್ತದೆ ಅವರ ಕಥೆಗಳಲ್ಲಿ

ಆಯಾ ವರ್ಗಕ್ಕೆ ಅನುಗುಣವಾದ ಭಾಷೆಯನ್ನು ಬಳಸುವಲ್ಲಿ ನಿಪುಣರು. ಕೆಲವೊಂದು ಭಾಷೆಯ ವೈಶಿಷ್ಯತೆಗಳು ಓದುಗರನ್ನು ಮಂತ್ರಮುಗ್ದರನ್ನಾಗಿಸುತ್ತದೆ. ಅವರು ವಾಸ್ತವವಾಗಿ ಕಂಡ ಸಂಗತಿಗಳನ್ನು ಯತಾವತ್ತಾಗಿ ನಿರೂಪಿಸಬಲ್ಲರೆಂಬುದುನ್ನು ಅವರ ಕತೆಗಳನ್ನು ಓದಿದಾಗ ಓದುಗರಿಗೆ ಅದರ ಅನುಭವವಾಗುತ್ತದೆ. ಪಾತ್ರಗಳು ಸಹ ಆಯಾ ಸಂದರ್ಭಕ್ಕೆ ಹೊಂದಿಕೆಯಾಗು ವಂತಹ ಭಾಷೆಯನ್ನು ಬಳಸುತ್ತಾರೆ. ಒಟ್ಟಾರೆಯಾಗಿ ಲೇಖಕರು ಭಾಷೆ ಬಳಿಕೆಯಲ್ಲಿ ತಮ್ಮದೇ ಆದ ವೈಶಿಷ್ಟ್ಯತೆ ಕಂಡುಬರುತ್ತದೆ. ಅವರ ಕತೆಗಳಿಗೆ ಸಹಜವಾಗಿ ಕೆಲವೊಂದು ಗಾದೆ ನುಡಿಗಟ್ಟುಗಳನ್ನು ಸಹ ಸಂದರ್ಭ ಸನ್ನಿವೇಶಕ್ಕೆ ಬಳಸಿಕೊಂಡಿರುವುದು ಕಂಡುಬರುತ್ತದೆ.

**ಹಾಸ್ಯ:**

ಎಂ.ವಿ.ಸೀ.ಯವರ ಕತೆಗಳು ತೀರ ಗಂಭಿರ ಗತಿಯಲ್ಲಿ ಸಾಗದಿದ್ದರೂ ಅವರ ಕಥೆಗಳಲ್ಲಿ ಹಾಸ್ಯದ ಕೆಲವೊಂದು ಅಂಶಗಳು ಕಂಡುಬರುತ್ತವೆ. ಕೆಲವು ಕತೆಗಳು ಒಂದು ಸ್ವಾರಸ್ಯಕರವಾದ ತಮಾಷೆಯ ಪ್ರಸಂಗವನ್ನು ನಿರೂಪಿಸುತ್ತವೆ. ಓದುಗರಿಗೆ ಸಂಸೋಷ ಕೊಡುವುದೇ ಅವುಗಳ ಸಾರ್ಥಕ್ಯ. "ಹಸ್ತಪರಿಗ್ರಹಣ' 'ಹಾದಿಯ ಚಲುವೆ' ಇಂಥದೊಂದು ಕಥೆಗಳು.

ಈ ಕತೆಯಲ್ಲಿ ಭಾವ-ಭಾವಮೈದರು ಚಲನಚಿತ್ರನೋಡಲು ಹೋಗಿ, ಮಧ್ಯಕುಳಿತ ಸುಂದರಿಯ ಕೈ ಎಂದು ಪರಸ್ಪರರ ಕೈಹಿಡಿದುಕೊಂಡು ಕುಳಿತುಕೊಂಡಿದ್ದು ಸಿನಿಮಾ ಮುಗಿದು ದೀಪ ಬಂದಾಗ ನಿಜಾಂಶ ತಿಳಿಯುತ್ತದೆ, ಹೀಗೆ ಇವರು ಕುಳಿತಿದ್ದಾಗಲೇ ಸಿಪಾಯಿಯೊಬ್ಬ ಭಾವನಿಗೆ ಅರಿವಾಗದಂತೆ ಅವನ ಜುಟ್ಟನ್ನು ಕತ್ತರಿಸಿಬಿಟ್ಟಿರುತ್ತಾನೆ ಇಂಥ ಮತ್ತೊಂದು ಕಥೆ ಹಾದಿಯ ಚಲುವೆ.

ಕಥೆ ಹೇಳುವವನು ರಸ್ತೆಯಲ್ಲಿ ಹೋಗುತ್ತಿರುವಾಗ ಅವನ ಗೆಳೆಯ ವಾಚಾಳಿ ವಾಗೀಶಾಚಾರ್ಯ ಅವನನ್ನು ಕಂಡು ಸೈಕಲ್ಲಿನಿಂದ ಇಳಿಯುತ್ತಾನೆ. ಮುಂದೆ ಹೋಗುತ್ತಿರುವ ಹೆಂಗಸೊಬ್ಬಳನ್ನು ಕುರಿತು ಬಾಯಿಗೆ ಬಂದಂತೆ (ಆದರೆ ಇದರಲ್ಲಿ ಅಶ್ಲೀಲವಿಲ್ಲ) ಹರಟುತ್ತಾನೆ. ತುಂಬ ಸುಂದರಿ

ಇರಬೇಕು ಎನ್ನುತ್ತಾನೆ. ಅವಳ ಉಡುಪು, ಆಭರಣ, ಅಂಗಸೌಷ್ಠವ ಎಲ್ಲ ಹೊಗಳುತ್ತಾನೆ. ಅವಳು ಎಡಕ್ಕೆ ತಿರುಗಿದಾಗ ತನ್ನ ಗೆಳೆಯನೂ ಎಡಕ್ಕೆ ತಿರುಗಿದುದನ್ನು ಕಂಡು ಇದು ಹೆಂಗಸರಾಸ್ಪತ್ರೆ ಸಾಕು ಹಿಂಬಾಲಿಸಿದ್ದು ನನ್ನ ಜೊತೆ ಬಾ ಸುಮ್ಮನೆ. ನೋಡು ಇದು ಚನ್ನಲ್ಲ ಯಾರ ಹೆಂಡತಿಯೋ ಏನೋ ಎಂದು ಬುದ್ಧಿ ಹೇಳುತ್ತಾನೆ. ಅದುವರೆಗೂ ಅವನ ಮಾತನ್ನೆಲ್ಲ ಕೇಳುತ್ತಿದ್ದ ಕಥೆ ಹೇಳುವವನು, "ನನ್ನ ಹೆಂಡತಿಯೇ ಕಣಯ್ಯ, ವಾಗೀಶ ಎಂದು ಹೇಳುತ್ತಾನೆ. ನನ್ನ ಮಾತು ಮುಗಿಯುವದರೊಳಗೆ ಕಣ್ಣುಮುಚ್ಚಿ ಬಿಡುವಷ್ಟುರಲ್ಲಿ 'ವಾಗೀಶಾಚಾರ್ಯ ತನ್ನ ವಾಹನವನ್ನೇರಿ ಮಯವಾಗಿ ಬಿಟ್ಟಿದ್ದ, ತಪ್ಪು ಏನಾದರೂ ಅವನದಲ್ಲ, ಮೌನವಾಗಿದುದ್ದು ತನ್ನ ತಪ್ಪು' ಈ ರೀತಿ ಒಂದು ಹಾಸ್ಯ ಪ್ರಸಂಗದಂತೆ ಕಂಡರೂ ಕತೆಯ ಕೊನೆಯವರೆಗೂ ಕುತೂಹಲವನ್ನು ಓದುಗನಲ್ಲಿ ಉಂಟುಮಾಡುತ್ತದೆ.

ಇಂತಹ ಕಥೆಗಳನ್ನು ಶ್ರೇಷ್ಠ ಕೃತಿಗಳು ಎನ್ನಲಾಗದಿದ್ದರೂ ಓದುವಾಗ ಸಂತೋಷ ಕೊಡುತ್ತವೆ ಎನ್ನುವುದು ನಿಜ. ದುಷ್ಟತನವಲ್ಲದ ಚಪಲದಲೀಲೆ ಇವುಗಳಲ್ಲಿ ಸಾಮಾನ್ಯವಾಗಿ ಕಾಣುವುದು. ಇವುಗಳಲ್ಲಿನ ಹಾಸ್ಯ ಸ್ನೇಹ ರೀತಿಯದು. ಕಟುವಿಡಂಬನೆ ಇಲ್ಲ ಇನ್ನೂ ಕೆಲವು ಕಥೆಗಳಲ್ಲೂ ಆಕಸ್ಮಿಕಗಳು ತಪ್ಪು ವ್ಯಾಖ್ಯಾನಗಳು ಪಾತ್ರವಹಿಸುತ್ತವೆ. ಇವುಗಳ ಪರಿಣಾಮ ಸಾಕಷ್ಟು ಗಂಭೀರತೆ ಆದರೆ ದುರಂತದ ಹಾದಿಯನ್ನು ಹಿಡಿಯುವುದಿಲ್ಲ. ಮದುವೆಯ 'ಉಡುಗೊರೆ' ಯಂತಹ ಕಥೆಯನ್ನು ಓದುಗರ ಆಸಕ್ತಿಯನ್ನು ಕೆರಳಿಸುವ ಪ್ರಯತ್ನ ಅತಿಯಾಗಿ ಕಂಡುಬಂದು. ಮುಕ್ತಾಯ ಬೆರಗುಗೊಳಿಸುವ ಬದಲು ತೀರ ಹಾಸ್ಯಾಸ್ಪದವಾಗುತ್ತದೆ.

ಎಂ.ವಿ.ಸೀಯವರು ಕೆಲವು ಕತೆಗಳು ಯಾವುದೇ ಒಂದು ಘಟನೆಯಿಂದ ಪ್ರಾರಂಭವಾಗಿ ಕಥೆ ಬೆಳೆಯುತ್ತದೆ. ಇಂತಹ ಅನೇಕ ಕಥೆಗಳು ಸುಖಾಂತದಲ್ಲಿ ಮುಳುಗಿದರೆ, ಕೆಲವು ಕತೆಗಳು ದುಃಖದಲ್ಲಿ ಮುಳುಗುತ್ತವೆ. ಅವರು ತಮ್ಮ ಸಣ್ಣಕತೆಗಳ ಮೂಲಕ ಸಾಮಾಜಿಕ ಜೀವನದ ಒಳಿತು ಕೆಡಕುಗಳಿಗೆ ಕನ್ನಡಿ ಹಿಡಿಯುವಂತಹ ಕೆಲಸ ಎಂ.ವಿ.ಸೀಯವರು ತಮ್ಮ ಸಣ್ಣಕತೆಗಳ ಮೂಲಕ ಸಾಧಿಸಿದ್ದಾರೆ.

ಎಂ.ವಿ.ಸೀಯವರು ಅವರ ಎದುರಿಗೆ ಯಾವುದಾದರೂ ಒಂದು ಘಟನೆ ಸನ್ನಿವೇಶಗಳು ಸಂಭವಿಸಿದರೆ ಅದನ್ನು ಯತಾವತ್ತಾಗಿ ಅವರ ಸಾಹಿತ್ಯದಲ್ಲಿ ಬಳಸಿಕೊಳ್ಳುವುದು ಅವರ ಸಹಜತೆಗೆ ಕಾರಣವಾಗಿದೆ. ಅವರು ಅಂತಹ ಘಟನೆ, ಸನ್ನಿವೇಶಗಳಲ್ಲಿ ಸ್ವಾರಸ್ಯ ಕಡೆದರೀತಿಯಲ್ಲಿ ಯತಾವತ್ತಾಗಿ ಚಿತ್ರಿಸಿಬಲ್ಲರು. ನಿಲ್ದಾಣಗಳ ನಡುವೆ ನೂರನಲವತೆರಡು ಕಡಲೆಪುರಿಯ ಕೆಂಪಮ್ಮ ಮುಂತಾದ ಕಥೆಗಳನ್ನುಹೆಸರಿಸಬಹುದು.

ಒಟ್ಟಿನಲ್ಲಿ ಲೇಖಕರ ನಮ್ಮ ಸಮಾಜದ ಗಂಡು-ಹೆಣ್ಣುಗಳ ವಿವಿಧ ಬಗೆಯ ಸಮಸ್ಯೆಗಳನ್ನು ಎತ್ತಿಕೊಂಡು ಕಥೆಯ ರೂಪುಕೊಟ್ಟಿದ್ದಾರೆ. ಕಥೆ ಸಣ್ಣವಾದರೂ ಅದನ್ನು ಬೆಳಸಿಕೊಂಡು ಹೋಗುಬಲ್ಲ ಶಕ್ತಿ ಇವರ ಲೇಖನಿಗಿದೆ. ಕಥೆಯನ್ನು ಜಿಂಕೆಯಂತೆ ಹಾರಿಸಿಕೋಂಡು ಹೋಗದೆ ಪ್ರತಿಯೊಂದು ಎಳೆಯನ್ನು ಬಿಡಿಸಿ ಸವಿಸ್ತಾರವಾಗಿ ಮಂದಗಮನದ ತರಂಗಿಣಿಯಂತೆ ಸಾಗಿಸುತ್ತಾರೆ. ಕಥೆಗಳನ್ನು ಓದುದಂತೆಲ್ಲಾ ಗಂಭೀರವಾದ ಶೈಲಿ ಹೊಸದುಕೊಂಡು, ಒಮ್ಮೆ ಆರಂಭಸಿದ ಮೇಲೆ ಪುಟಗಳುರುಳುತ್ತಿರುವುದೂ ತಿಳಿಯದಂತಿರುತ್ತದೆ.

# ಅಡಿ ಟಿಪ್ಪಣಿ

೧) ಶ್ರೀವತ್ಸ, ಅನಂತ ಪದ್ಮರಾವ್, ಹೆಚ್.ಎಂ.ರಂಗನಾಥ್ - ಆಸ್ವಾದ - ಪುಟಸಂಖ್ಯೆ-೨೩

೨) ಪ್ರೊ.ಎಂ.ವಿ.ಸೀತಾರಾಮಯ್ಯ - ಬಿಸಿಲು ಬೆಳದಿಂಗಳು - ಪುಟಸಂಖ್ಯೆ -೧೪೬

೩) ಪ್ರೊ.ಎಂ.ವಿ.ಸೀತಾರಾಮಯ್ಯ - ಬಿಸಿಲು ಬೆಳದಿಂಗಳು - ಪುಟಸಂಖ್ಯೆ -೫೧

## ಅಧ್ಯಾಯ-೬

## ಸಣ್ಣಕತೆಗಳ ಕ್ಷೇತ್ರಕ್ಕೆ ಎಂ.ವಿ.ಸೀ ಯವರ ಕೊಡುಗೆ

ಕನ್ನಡ ಸಾಹಿತ್ಯದ ಆಧುನಿಕ ಲೇಖಕರಲ್ಲಿ ಅನೇಕರು ಸಾಹಿತ್ಯರೂಪಗಳಲ್ಲಿ ಯಾವುದಾದರೂ ಒಂದನ್ನು ಆರಿಸಿಕೊಂಡು ಈ ರೀತಿಯಲ್ಲಿ ಕೀರ್ತಿ ಸಂಪಾದಿಸಲು ಪ್ರಯತ್ನ ಪಟ್ಟಿದ್ದಾರೆ. ಆದರೆ ಸಾಹಿತ್ಯದ ಎಲ್ಲಾ ಪ್ರಕಾರಗಳಲ್ಲಿಯೂ ತಮ್ಮ ಕಲ್ಪನೆಯನ್ನು ಹರಿಯಬಿಟ್ಟವರು ಹೆಚ್ಚಾಗಿ ಸಿಕ್ಕುವುದಿಲ್ಲ. ಇದಕ್ಕೆ ಸರ್ವತೋಮುಖವಾದ ಆಸಕ್ತಿಯೂ, ಶ್ರದ್ದೆಯು, ಕಾರ್ಯಶೀಲತೆಯೂ ಬೇಕು. ಹೀಗೆ ಕೆಲಸಮಾಡಿದರವರಲ್ಲಿ ಈ ಕತೆಗಾರರು ಒಬ್ಬರು. ವಿಸ್ತಾರವಾದ ಮತ್ತು ಆಳವಾದ ವ್ಯಾಸಾಂಗವನ್ನು ಮಾಡಿದ್ದರೂ ಎಲೆಯಮರೆಯ ಹೂವಿನಂತಿದ್ದು ತಮ್ಮ ಸಾರಸ್ವತ ಕಾರ್ಯದಿಂದ ಪರಿಮಳವನ್ನು ಹರಡುವವರು ಶ್ರೀ. ಎಂ.ವಿ.ಸೀ. ಇವರ ಕತೆ, ಕಾದಂಬರಿ, ನಾಟಕ, ಕವನ, ವಿಮರ್ಶೆ ಮುಂತಾದ ವಿವಿಧ ಲೇಖನಗಳನ್ನು ಓದಿರುವವರಿಗೆ ಇದು ಗೊತ್ತಾಗುತ್ತದೆ. ಆತ್ಮಪ್ರಶಂಸೆಯೂ ಬೇಕಾದವರ ಕಹಳೆಯೂ ಇಲ್ಲದವರಿಗೆ ಕೀರ್ತಿ ಬರುವುದು ನಿಧಾನವಲ್ಲ. ಅರ್ಹತೆಯಿದ್ದ ಕಡೆ ಅದು ಬರುವುದು ಖಂಡಿತ. ಈ ರೀತಿ ಬಂದಿರುವುದು ಇವರ ಕೀರ್ತಿ ಕಾಲು ಶತಮಾನಕ್ಕೂ ಮೀರಿದ ಶ್ರದ್ಧಾಯುತವಾದ ಜೀವನದಿಂದ ಬಂದಿದೆ.

ಎಂ.ವಿ.ಸೀತಾರಾಮಯ್ಯನವರು ಸಂಶೋಧಕರೆಂದೇ ಪ್ರಸಿದ್ಧಿಗಳಿಸಿದ್ದರೂ ಸಹ ಸಾಹಿತ್ಯ ಎಲ್ಲಾ ಪ್ರಕಾರಗಳಲ್ಲಿ ತಮ್ಮ ಕೊಡುಗೆಯನ್ನು ಕೊಟ್ಟಿದ್ದಾರೆ. ಅವರು ಕನ್ನಡ ಸಾಹಿತ್ಯಕ್ಕೆ ಹತ್ತು ಕಥಾಸಂಕಲನಗಳನ್ನು ಬರೆದಿದ್ದಾರೆ. ಸುಮಾರು ೮೦ ಕ್ಕೂ ಹೆಚ್ಚು ಕಥೆಗಳನ್ನು ಬರೆದು ಕನ್ನಡ ಕಥಾಸಾಹಿತ್ಯಕ್ಕೆ ಕೊಡುಗೆಯನ್ನು ಕೊಟ್ಟಿದ್ದಾರೆ. ಅವರ ಕಥೆಗಳನ್ನು ಒಂದೊಂದು ದೃಷ್ಟಿಯಿಂದ ನೋಡಿದಾಗ ಒಂದೊಂದು ರೀತಿಯಲ್ಲಿ ಕಾಣುತ್ತವೆ. ಸಮಾಜದ ಎಲ್ಲಾ ಸ್ತರದ ವ್ಯಕ್ತಿಗಳು ಅವರ ಕಥೆಗಳಲ್ಲಿ ಓದುಗರಿಗೆ ಪರಿಚಯವಾಗುತ್ತಾರೆ.

ಎಂ.ವಿ.ಸೀರವರ ಕಥೆಗಳನ್ನು ಗಮನಿಸಿದಾಗ ಅವರ ಅನೇಕ ಸಣ್ಣಕತೆಗಳು ಸಮಾಜದಲ್ಲಿ ಇರುವಂತ ಜಾತಿಪದ್ಧತಿ, ಧರ್ಮದ ವಿಚಾರ, ಶ್ರೀಮಂತ-ಬಡವ, ಬಡವರ ಕಷ್ಟ, ಬಡತನ, ಸಾಂಸಾರಿಕ ಜೀವನದಲ್ಲಿ ಕಂಡುಬರುವ ಎಡರು ತೊಡರುಗಳನ್ನು ಸಹೃದಯ ಓದುಗರಿಗೆ ಪರಿವಯನ್ನು ಮಾಡಿಕೊಡುವ ಪ್ರಯತ್ನ ಮಾಡಿದರು. ಆಂದಿನ ಕಾಲದಲ್ಲಿ ಉನ್ನತ ಜನಾಂಗದವರಿಗೆ ಜಾತಿ ಸಮಸ್ಯೆ ಎಲ್ಲರನ್ನು ಕಟ್ಟಿಹಾಕುವ ಸಾಧನವಾಗಿದೆ. ಅಂತಹ ಸಂದಿಗ್ದತೆಗೆ ಒಳಗಾದವರಲ್ಲಿ ಎಂ.ವಿ.ಸೀ. ಒಬ್ಬರು. ಇಂತಹ ಅನೇಕ ಅಗ್ರಗಣ್ಯ ಬರಹಗಾರರು ಇಂತಹ ಒತ್ತಡಗಳಿಗೆ ಒಳಗಾದದ್ದುಂಟು. ಅಂತಹ ಸಂದಿಗ್ಧ ಪರಿಸ್ಥಿತಿಯಲ್ಲಿ ಎಂ.ವಿ.ಸೀ. ತಮ್ಮ ಕಥೆಗಳ ಮೂಲಕ ಸಮಾಜದ ಲೋಪದೋಷಗಳನ್ನು ತಿದ್ದುವ, ಜನರಿಗೆ ಮನವರಿಕೆ ಮಾಡಿಕೊಡುವಂತಹ ಕೆಲಸವನ್ನು ಮಾಡಿದರು. ಸಾಹಿತ್ಯದ ಮೂಲಕ ನೊಂದವರಿಗೆ ಸಾಂತ್ವಾನವನ್ನು ಹೇಳುವಂತಹ ಕೆಲಸವನ್ನು ಮಾಡಿದರು. ಕೆಲವು ಕಥೆಗಳಲ್ಲಿ ಪರಿಹಾರವನ್ನು ದೊರಕಿಸುವಂತ ಕಥೆಗಳನ್ನು ಅವರು ಬರೆದಿದ್ದಾರೆ.

"ಎಂ.ವಿ.ಸೀ. ರವರು ಆಸ್ವಾದದಲ್ಲಿ ಹೇಳಿದ ಹಾಗೆ ಅವರು ಎಸ್.ಎಸ್.ಎಲ್.ಸಿ ತರಗತಿಯಲ್ಲಿ ವಿದ್ಯಾಭ್ಯಾಸ ಮಾಡುವಂತ ಸಂದರ್ಭದಲ್ಲಿ 'ಬಿಳಿ ತೊನ್ನಿನ' ಬಾಲಕನೊಬ್ಬನನ್ನು ಇತರ ಬಾಲಕರು ದೂರವಿಡುತ್ತಿದ್ದು ನಮಗೆ ತುಂಬಾ ವ್ಯಥೆಯನ್ನುಂಟು ಮಾಡಿತು. ಈ ಸಂದರ್ಭದಲ್ಲಿ ರಚಿತವಾದದ್ದು ನನ್ನ 'ಬಗೆದಂತೆ ಬಾಳು' ಎಂಬ ಸಣ್ಣಕತೆ. ಬೆಂಗಳೂರು ಸೆಂಟ್ರಲ್ ಕಾಲೇಜು ಕರ್ನಾಟಕ ಸಂಘದ ಮುದ್ದಣ್ಣ ಸ್ವರ್ಣಪದಕ ಕಥಾ ಸ್ಪರ್ಧೆಯಲ್ಲಿ ಈ ಕಥೆ ಎರಡನೇ ಬಹುಮಾನ ಪಡೆಯಿತು. ಇಂಥ ಸನ್ನಿವೇಷಗಳಲ್ಲಿ ಕೃತಿಯ ರಚನೆಯ ಮೂಲಕ ಅನುಕಂಪವನ್ನು ವ್ಯಕ್ತಪಡಿಸುವುದು ಸುಲಭ. ಎಷ್ಟೋ ಇನ್ನಿತರ ಸಂದರ್ಭಗಳಲ್ಲಿ ನನ್ನ ನಂಬಿಕೆ–ನಿಷ್ಠೆಗಳನ್ನು ಕಾರ್ಯತಃ ಆಚರಣೆಗೆ ತರುವಲ್ಲಿ ಮಾತ್ರ ನಾನು ಸೋತಿದ್ದೆ ಎಂದು ಕಾಣುತ್ತದೆ. ಅಂದಿನ ವಾತಾವರಣ ಅಂತದ್ದು, ಸಮಾಜದ ಕಟ್ಟುಕಟ್ಟಳೆಗಳನ್ನು ಎದುರಿಸಿ ತನ್ನ ಮನಸಾರೆಯಂತೆ ನಡೆದುಕೊಳ್ಳಲು ಇಂದಿನ ತರುಣ ಪೀಳಿಗೆಗೆ ಸುಲಭವಾಗಿರುವಷ್ಟು, ಅಂದಿನ ಪೀಳಿಗೆಗೆ ಸುಲಭವಾಗಿರಲಿಲ್ಲ. ಅಂದು ಧರ್ಮ ಸಂಕಟದ ಒತ್ತಡಕ್ಕೆ ಸಿಲುಕಿ ಒದ್ದಾಡುತ್ತಿದ್ದೆವು. ಇದು ನನ್ನೊಬ್ಬನ ಎದೆಗುಂದಿಯಾಗಿರಲಿಲ್ಲ. ಬಹುಶಃ ಮೇಲು ಜಾತಿಯವರು ಎನಕೊಂಡ ಎಲ್ಲ ತರುಣರನ್ನು ಭಾದಿಸುತ್ತಿದ್ದ ಧರ್ಮ ಸಂಕಟ, ಧರ್ಮ ಬೇರೆ, ಜಾತಿ ಬೇರೆ ಎಂಬ ವಿವೇಕ ಜಾಗ್ರತವಾದುದರಿಂದಲೇ ಆ ತೊಳಲಿಕೆಗೆ ಈ ಜಾತಿ ಸಮಸ್ಯೆ ಈಗಲೂ ನಮ್ಮನ್ನು ಕಾಡುತ್ತಿದೆ". ೧ ಎಂದು ಹೇಳಿಕೊಂಡಿದ್ದಾರೆ. ಈ ಕಥೆಯಲ್ಲಿ ಲೇಖಕರು ತೊನ್ನು ಹತ್ತಿದ ಹುಡುಗನನ್ನು ಕುರಿತು ತಮ್ಮ ಕತೆಗಳ ಮೂಲಕ ಚಿತ್ರಿಸಿ ಅವನ ಬಗ್ಗೆ ಓದುಗರಲ್ಲಿ ಅನುಕಂಪ ತೋರುವಂತೆ ಮಾಡುವಂತದ್ದು. ಜೊತೆಗೆ ನೊಂದವರಿಗೆ ಸಾಂತ್ವಾನವನ್ನು ಹೇಳುವಂತದ್ದು. ಎಂ.ವಿ.ಸೀ.ರವರ ಕೆಲವು ಕಥೆಗಳಲ್ಲಿ ಪ್ರೀತಿ, ಪ್ರಣಯ ಪ್ರಸಂಗವನ್ನು ತರುತ್ತಾರೆ. ಆದರೆ ಇದರಲ್ಲಿ ಅಶ್ಲೀಲ ಕಂಡುಬರುವುದಿಲ್ಲ. ಇದು ಕೂಡ ಅವರ ಕೊಡುಗೆಗಳಾಗಿವೆ.

ಮಾಸ್ತಿಯವರು ಸಣ್ಣಕತೆಗೆ ಒಂದು ಮಾರ್ಗವನ್ನು ಹಾಕಿಕೊಟ್ಟರು. ಅದನ್ನು ಅನೇಕ ಕಥೆಗಾರರು ಗುರುಪರಂಪರೆಯನ್ನು ಪೋಷಿಸಿಕೊಂಡು ಅದೇ ಮಾರ್ಗದಲ್ಲಿ ಕಥೆಗಳನ್ನು ರಚಿಸಿದವರಲ್ಲಿ ಎಂ.ವಿ.ಸೀ. ಒಬ್ಬರು. ಇವರು ಮಾಸ್ತಿಯವರಂತೆ ಸಂಪ್ರದಾಯ, ಶ್ರದ್ಧೆ, ಪರಂಪರೆ, ಧರ್ಮಕ್ಕೆ ನಿಷ್ಠರಾಗಿದ್ದುಕೊಂಡರು. ಸಾಂಪ್ರದಾಯಿಕ ನೆಲೆಯಲ್ಲಿ ಮನುಷ್ಯ–ಮನುಷ್ಯನನ್ನಾಗಿ ನೋಡುವಂತೆ ತಮ್ಮ ಕತೆಗಳ ಪಾತ್ರಗಳ ಮೂಲಕ ಜನರಿಗೆ ಮನವರಿಕೆ ಮಾಡಿದರು.

ಎಂ.ವಿ.ಸೀ. ರವರು ಕಲೆಗೆ ಅಪಾರವಾದ ಗೌರವವನ್ನು ಕೊಡುತ್ತಿದ್ದರು. ಅಲ್ಲದೇ ಅವರು ಸಹಾ ಚಿತ್ರ ಬಿಡಿಸುವುದರಲ್ಲಿ ಸ್ವಲ್ಪ ಮಟ್ಟಿನ ಹೆಸರು ಗಳಿಸಿದ್ದರು. ಆದ್ದರಿಂದ ಅವರ ರತಿದೇವಿ ಮತ್ತು ಅಮರಕಲೆ ಇವು ಕಲಾದೃಷ್ಟಿಯಿಂದ ಅತ್ಯುತ್ತಮ ಕತೆಗಳು. ಇಲ್ಲಿ ಒಬ್ಬ ಚಿತ್ರಗಾರನಿಗೆ ಎಷ್ಟು ಶ್ರದ್ದೆ, ಭಕ್ತಿ, ಧೃಡಮನಸ್ಸು, ಏಕಾಗ್ರತೆ ಮುಖ್ಯ ಎಂಬುದನ್ನು ಮನವರಿಕೆ ಮಾಡಿದ್ದಾರೆ. ಈ ಕಥೆಗಳ ಮೂಲಕ ಅಂದಿನ ಸಮಾಜದಲ್ಲಿ ಚಿತ್ರಕಲೆಗೆ ಎಷ್ಟು ಮಹತ್ವವಿತ್ತು ಎಂಬುದನ್ನು ತಿಳಿಸುವಂತದ್ದು.

ಮಾಸ್ತಿಯವರು ನವೋದಯದ ಶ್ರೇಷ್ಠ ಕಥೆಗಾರರು. ಅಂತಹ ಕಥೆಗಾರರು ಹೋಗಿ ಹೊಸ ಪೀಳಿಗೆಯ ಯುಗಪ್ರವರ್ತಕ ಅಡಿಗರು ಬರುವವರಿಗೆ ಸಹ ಕಾಯಬೇಕಾಯಿತು. ಈ ನಡುವಿನ ಅಂತರದಲ್ಲಿ ಎರಡನೇ ಪೀಳಿಗೆಯ ಲೇಖಕರು ಈ ಅಂತರದಲ್ಲಿ ಕೊರತೆ ಬರಬಾರದೆಂದು ಸಣ್ಣಕತೆಗಳನ್ನು ಬರೆದರು. ಈ ಅಂತರದಲ್ಲಿ ಸಾಹಿತ್ಯ ಕೃಷವಾಗಬಾರದೆಂಬ ದೃಷ್ಟಿಯಿಂದ ಮತ್ತು ಸಣ್ಣಕತೆಗಳನ್ನು ಓದುವ ಕುತೂಹಲದಿಂದ ಆನಂದ, ಗೋಪಾಲರಾಯರು, ಅಶ್ವಥ್ಥ, ಎಂ.ವಿ.ಸೀ. ರವರು ಕತೆಗಳನ್ನು ಬರೆದರು. ಇವರು. ನವೋದಯದ ಕಟ್ಟನ್ನು ಹೊಡೆದು ನವೋದಯದ ಗಡಿಗಳನ್ನು ಹೀಗಿರಬೇಕು, ಆದರ್ಶ ಸಾಹಿತ್ಯ ಎಂದರೆ ಹೀಗಿರಬೇಕು. ಸ್ವತಂತ್ರ ಆದರ್ಶವನ್ನು ಪ್ರತಿಪಾದಿಸುತ್ತಿದ್ದ ಹೊಸದನ್ನು ಹೇಳುವ, ಹೊಸದನ್ನು ಹುಡುಕುವ ಪ್ರಜ್ಞೆ ಕಂಡುಬರುತ್ತದೆ. ನವೋದಯ ಕಾಲಘಟ್ಟದಲ್ಲಿ ಪುಟ್ಟಪ್ಪ, ಬೇಂದ್ರೆ, ಮಾಸ್ತಿ ಮುಂತಾದವರು ಮಾರ್ಗಪ್ರವರ್ತಕರು. ಇವರು ಒಂದು ಪರಂಪರೆಯನ್ನು ಬೆಳಸಿಕೊಂಡು ಬಂದು ಆ ಪರಂಪರೆಯಲ್ಲಿ ಓದುಗರ ಆಸಕ್ತಿಯನ್ನು ಉಳಿಸಿಕೊಂಡು ಬರುವಂತ ಕೆಲಸವನ್ನು ಎರಡನೇ ಘಟ್ಟದ ಲೇಖಕರು ಮಾಡಿದರು. ಅಂತಹವರಲ್ಲಿ ಎಂ.ವಿ.ಸೀ ಒಬ್ಬರಾಗಿದ್ದಾರೆ. ಪರಂಪರೆಯನ್ನು ಉಳಿಸಲು ಹೊಸದೊಂದು ಪರಂಪರೆಗೆ ಅವರದೇ ವೈಶಿಷ್ಟತೆ ಇದೆ. ಅದೇ ಮಾರ್ಗದಲ್ಲಿ ಅರ್ಥಪೂರ್ಣವಾಗಿ ಬದುಕುವ ರೀತಿ ಅರ್ಥಪೂರ್ಣ ಪರಂಪರೆಯಲ್ಲಿ ಕೆಲವು ಒಳ್ಳೆಯ ಕಥೆಗಳನ್ನು ಬರೆದರು.

ಎಂ.ವಿ.ಸೀ. ರವರು ಕಥೆಗಳನ್ನು ಬರೆಯುವಂತ ಸಂದರ್ಭ ಸ್ವಾತಂತ್ರ್ಯ ಬರುವ ಸಂದರ್ಭವಾಗಿತ್ತು. ಅದು ಸಹ ಕಥೆಗಾರರ ಮೇಲೆ ಪ್ರಭಾವ ಬೀರಿದೆ. ಆದ್ದರಿಂದ ಕೆಲವು ಕಥೆಗಳಲ್ಲಿ ಸನ್ನಿವೇಶವನ್ನು ಕೆಲವು ಪಾತ್ರಗಳ ಮೂಲಕ ಚಿತ್ರಿಸಿ ಜನರಿಗೆ ಮನವರಿಕೆ ಮಾಡುವುದು ಅವರ ಮುಖ್ಯ ಉದ್ದೇಶ. ದೇಶಕ್ಕಾಗಿ ಪ್ರಾಣತ್ಯಾಗವನ್ನು ಮಾಡುವ ಕಥೆ ಎಂದರೆ 'ನಿಷ್ಪ್ರಯೋಜಕ' ಇದು ತುಂಬಾ ಯಶಸ್ವಿಯಾದ ಕಥೆ ಇಲ್ಲಿ ಸೀನ ಎಲ್ಲರ ದೃಷ್ಟಿಯಿಂದ ನಿಷ್ಪ್ರಯೋಜಕನಾಗಿ, ನಿರುದ್ಯೋಗಿಯಾಗಿ ಕಾಣುತ್ತಾನೆ. ಅವನು ತನ್ನ ಊರನ್ನು ಬಿಟ್ಟು ಪಟ್ಟಣಕ್ಕೆ ಹೋಗಿ ಅಲ್ಲಿ ಒಳ್ಳೆಯ ಕೆಲಸಕ್ಕೆ ಹೋಗಿ ತನ್ನ ತಂಗಿಯ ಮದುವೆಯನ್ನು ಮಾಡಿ ನಾನು ನನ್ನ ಜವಾಬ್ದಾರಿಯನ್ನು ಮುಗಿಸಿದೆ. ಇನ್ನು ದೇಶ ಸೇವೆಯನ್ನು ಮಾಡೋಣವೆಂದು ಮನಸು ಮಾಡಿ ಸೀನ ಸ್ವಾತಂತ್ರ್ಯ ಹೋರಾಟದಲ್ಲಿ ಮುಳುಗಿ ಸ್ವಾತಂತ್ರ್ಯಕ್ಕಾಗಿ ಪ್ರಾಣ ತ್ಯಾಗ ಮಾಡಿದ. ಇದು ಅಂದಿನ ಪರಿಸ್ಥಿತಿ ಸ್ವಾತಂತ್ರ್ಯ ಬರುವ ಸಂದರ್ಭವಾಗಿತ್ತು. ಆದ್ದರಿಂದ ಈ ಕತೆ ಜನರಿಗೆ ದೇಶಪ್ರೇಮವನ್ನು ಹುಟ್ಟಿಸುವ ಅಥವಾ ಜನರಿಗೆ ಮನವರಿಕೆ ಮಾಡಿಕೊಡುವ ಕಥೆಯಾಗಿದೆ.

'ನಿಲ್ದಾಣಗಳ ನಡುವೆ' ಇದು ಒಂದು ಉತ್ತಮ ಕಥೆ. ಇಲ್ಲಿ ಯಾಕೂಬ್ ಕಥೆಯ ನಾಯಕ ಈತ ಮುಸ್ಲಿಂ ಜನಾಂಗಕ್ಕೆ ಸೇರಿದವನು. ಅವನು ದುಡಿಯಲು ಪಾಕಿಸ್ತಾನಕ್ಕೆ ಹೋಗಿ ಅಲ್ಲಿನ ವಾತಾವರಣಕ್ಕೆ ಹೊಂದಿಕೊಳ್ಳದೆ, ಅಲ್ಲಿನ ಅವ್ಯವಹಾರ ಕಂಡು ಅಲ್ಲಿಂದ ಬಿಡಿಸಿಕೊಂಡು ಭಾರತಕ್ಕೆ ಹಿಂತಿರುಗುತ್ತಾನೆ. ಆಗ ಅವನು ಮೈಸೂರಿನ ಹತ್ತಿರವಿರುವ ಶ್ರೀರಂಗಪಟ್ಟಣದ ರಂಗನಾಥಸ್ವಾಮಿ ದೇವರ ಬಗ್ಗೆ ಅವನ ಮನೆತನಕ್ಕೆ ಅಪಾರವಾದ ಗೌರವ, ಭಕ್ತಿ ಇರುವಂತದ್ದು ಅವನ ಮಾತುಗಳಿಂದ

ಅರ್ಥವಾಗುತ್ತದೆ. ಇಲ್ಲೂ ಕೂಡ ಹಿಂದೂ ಧರ್ಮವನ್ನು, ಸಂಪ್ರದಾಯವನ್ನು ವೈಭವೀಕರಿಸುವುದು ಅವರ ಕೊಡುಗೆಯಾಗಿದೆ.

ಅವರು ತಮ್ಮ ಕಥೆಗಳಲ್ಲಿ ಸಮಾಜದ ಎಲ್ಲಾ ರೀತಿಯ ಲೋಪದೋಷಗಳನ್ನು ತೋರಿಸುವುದು ಮತ್ತು ಜನರಿಗೆ ಮನವರಿಕೆ ಮಾಡಲು ಪ್ರಯತ್ನಿಸಿದರು. ಪ್ರತಿಯೊಬ್ಬ ಮನುಷ್ಯನು ತನ್ನ ನಿತ್ಯಜೀವನದಲ್ಲಿ ಅನೇಕ ರೀತಿಯ ಕಷ್ಟ, ಕಾರ್ಪಣ್ಯ, ದು:ಖ, ಸುಖಗಳು ಬರುತ್ತವೆ. ಅದರ ಬಗ್ಗೆ ಇತರರು ಅಸಹ್ಯ ಪಡದೆ ಅನುಕಂಪ, ಕರುಣೆಯನ್ನು ತೋರಿಸಬೇಕು. ಸಾಹಿತ್ಯದ ಮೂಲಕ ಮನವರಿಕೆ ಮಾಡಿದರು. ಅವರ ಕಥೆಗಳಲ್ಲಿ ಬರುವ ಪಾತ್ರಗಳು ನಮ್ಮ ಸಮಾಜದಲ್ಲಿ ಪ್ರತಿದಿನ ಕಾಣುವ ಅನೇಕ ರೀತಿಯ ವ್ಯಕ್ತಿಗಳು ಕಥೆಗಳಲ್ಲಿ ಕಂಡುಬರುತ್ತಾರೆ.

ಬಹು ಕುತೂಹಲಕಾರಿಯಾದ ಕತೆಯನ್ನು ಬರೆಯಬೇಕೆಂದು ಪ್ರಜ್ಞಾಪೂರ್ವಕ ಪ್ರಯತ್ನ ಮತ್ತು ಅತಿಭಾವುಕತೆ ಮತ್ತು ಇವುಗಳಿಂದ ಹಲವು ಕಥೆಗಳು ಎಂ.ವಿ.ಸೀ.ಯವರ ಕಥಾ ಸಾಹಿತ್ಯದ ಶ್ರೀಮಂತ ಕೊಡುಗೆಯಾಗಿದೆ. ೧೯೫೩ ರಲ್ಲಿ ಪ್ರಕಟವಾದ 'ಕರುಣಾಲಹರಿ' ಕಥಾಸಂಕಲನದಲ್ಲಿ ಬರುವ ಸಮಾಜದ ನಾನಾ ರೀತಿಯ ಸಮಸ್ಯೆಗಳನ್ನು ಚಿತ್ರಿಸುವಂತದ್ದು ಮತ್ತು ವಿಭಿನ್ನ ರೀತಿಯ ವ್ಯಕ್ತಿತ್ವಗಳನ್ನು ಪರಿಚಯ ಮಾಡಿಕೊಡುವ ಪ್ರಯತ್ನ ಮಾಡಿದ್ದಾರೆ. ಅಂತಹ ಕಥೆಗಳೆಂದರೆ ಕರುಣೆ, ಹಾದಿಯ ಚೆಲುವೆ, ಪ್ರಣಯಗೀತೆ, ಹೆತ್ತವರ ಪುಣ್ಯ, ಸಿಗರೇಟಿನ ತುಂಡು, ಅಳು, ಪೆಪ್ಪರಮೆಂಟು ಈ ಕಥೆಗಳು ತುಂಬಾ ಮಹತ್ವವಾದವು.

'ಕರುಣೆ' ಕಥೆ ಮನುಷ್ಯರಲ್ಲಿ ಸಹಜವಾಗಿರುವ ಕರುಣೆಯ ಅಂತಸ್ತುಗಳನ್ನು ಒಂದು ಸಣ್ಣ ಪ್ರಸಂಗದ ಮೂಲಕ ಗುರುತಿಸುತ್ತದೆ. ಈ ಕಥೆಯಲ್ಲಿ ನಾವು ಕಾಣುವುದು ಇಬ್ಬರು ತಬ್ಬಲಿಗಳನ್ನು ಕಥೆಯ ಪ್ರಾರಂಭದಲ್ಲಿ ಯಾರಿಂದಲೋ ಕಲ್ಲಿನೇಟು ತಿಂದು ರಕ್ತ ಸುರಿಸಿಕೊಳ್ಳುತ್ತಿರುವ ನಾಯಿಯ ಮರಿಯನ್ನು ಕತೆಯಲ್ಲಿ ಕಾಣವುದು ಯಾರೋ ಒಂದು ತಿಪ್ಪೆಯ ರಾಶಿಯ ಬಳಿ ಇರಿಸಿಹೋದ ಎಳೆಯ ಮಗುವನ್ನು (ಈ ನಾಯಿಮರಿಯೇ ತನ್ನ ಒಡೆಯನನ್ನು ಎಳೆಯ ಮಗುವಿನ ಬಳಿಗೆ ಕೊಂಡೊಯ್ಯುವುದು ಅರ್ಥವತ್ತಾಗಿದೆ) ಈ ಎರಡೂ ಸಂದರ್ಭದಲ್ಲಿ ಕರುಣೆ ಕಾರ್ಯಪ್ರವೃತ್ತ ವಾಗುವುದು ಚಿಕ್ಕ ಹುಡುಗ ರಾಮುವಿನಲ್ಲಿ ಅವನ ತಂದೆ ಕೃಷ್ಣಪ್ಪ ತಾಯಿ ಶಾರದಮ್ಮ ಇಲ್ಲಿ ಯಾರೂ ನಷ್ಕರುಣಿಗಳಲ್ಲ. ಆದರೆ ನಾಯಿಯನ್ನು ತರುವ ಸಂಭ್ರಮದಲ್ಲಿ ಟಿಫನ್ ಕ್ಯಾರಿಯರ್ ಕಳೆದುಕೊಂಡು ಬಂದ ಎಂದು ಅವರಿಬ್ಬರಿಗೂ ಕೂಪ. ಪಕ್ಕದ ಮನೆಯ ಸುಂದರಮ್ಮನು ಒಳ್ಳೆಯಾಕೆಯೇ, ಆದರೆ ಅವರಿಗೆ ನಾಯಿಯನ್ನು ಸಾಕುವ ಮನಸ್ಸು ಅಷ್ಟಾಗಿಲ್ಲ. ರಾಮುವಿನ ಧರ್ಮಸಂಕಟ ಪಕ್ಕದ ಮನೆಯ ರಾಯರ ಕರುಣೆಯನ್ನು ಚಿತ್ರಿಸುತ್ತದೆ. ನಾಯಿಗೆ ಆಶ್ರಯ ದೊರೆಯುತ್ತದೆ. ಮಗು ಸಿಕ್ಕಾಗ ರಾಮುವೇ ಅದರ ಬಳಿಗೆ ಧಾವಿಸಿ ಬಟ್ಟೆ ಸರಿಸಿ ಸಂಭ್ರಮ ಪಡುತ್ತಾನೆ. ಮನುಷ್ಯರ ಈ ಮಗುವಿನ ಸ್ಥಿತಿ ನಾಯಿಮರಿಯ ಸ್ಥಿತಿಗಿಂತ ಕೇಡು. ಅದನ್ನು ರಾಮು ಮುಟ್ಟಿದ ಎಂದು ತಂದೆ-ತಾಯಿ ಸಿಡುಕುತ್ತಾರೆ. ನಾಯಿಯನ್ನು ಸಾಕಿಕೊಂಡ ವೃದ್ಧ

ದಂಪತಿಗಳು ಈಗ ಮೂಕರು. 'ರಾಮು ನೀವು ಸಾಕಿಕೊಂಡು ಬಿಡಿ ಮಾವಯ್ಯ' ಎಂದರೆ ಎಲ್ಲರಿಗೂ ನಗು ಅಷ್ಟೆ ಅದನ್ನು ಸಾಕಿಕೊಳ್ಳಲು ಮುಂದೆ ಬರುವವಳು ಹೀನವೃತ್ತಿಯ ಕೆಳಜಾತಿಯ ಮಾದಿಗರ ನರಸಿ ರಾಮುವಿನ ನಾಯಿಮರಿ ಹೊಸತಾಯಿಯನ್ನು ಹಿಂಬಾಲಿಸುತ್ತದೆ.

ಕಥೆಯಲ್ಲಿ ಒಂದು ಸಮುದಾಯದ ಜನರೆಲ್ಲ ಅನಾಥ ಮಗುವನ್ನು ಬಾಯಿಯಿಂದ ಕೊಂಡಾಡುತ್ತಿದ್ದರೆ ಹೊರತು ಯಾರೂ ಸಹ ಮಾನವೀಯ ದೃಷ್ಟಿಯಿಂದ ರಕ್ಷಿಸಲು ಮುಂದೆ ಹೋಗುವುದಿಲ್ಲ. ಅವರೆಲ್ಲರೂ ಉನ್ನತ ಜಾತಿಯವರು. ಅವರ ಕರುಣೆ ಮಾತಿನ ಮೂಲಕ ಅಷ್ಟೆ. ಆದರೆ ಅಲ್ಲಿ ನಿಜವಾದ ಮಾನವೀಯತೆಯನ್ನು, ಅನುಕಂಪ, ಕರುಣೆಯನ್ನು ಕಾಣುವುದು 'ನರಸಿ'ಯಲ್ಲಿ. ನರಸಿಗೆ ಜಾತಿ ಬಗ್ಗೆಯಾಗಲೀ ಆ ಮಗುವಿನ ಬಗ್ಗೆ ಬೇದ-ಭಾವವಿಲ್ಲದೇ ಅನಾಥ ಮಗುವನ್ನು ಅಪ್ಪಿಕೊಳ್ಳುತ್ತಾಳೆ. ಆದರೆ ನಾಯಿ ರಾಮುವನ್ನು ತೊರೆದು ಹೊಸ ಅಮ್ಮ ನರಸಿಯನ್ನು ಹಿಂಬಾಲಿಸುವುದು ವ್ಯಂಗ್ಯದ ರೀತಿಯಲ್ಲಿ ಕಂಡುಬರುತ್ತದೆ.

ಹಾದಿಯ ಚೆಲುವೆ ಮತ್ತು ಸಿಗರೇಟಿನ ತುಂಡು ಕಥೆಗಳು ಓದುಗರಿಗೆ ಕುತೂಹಲವನ್ನು ಕೆರಳಿಸುವಂತ ಕಥೆಗಳು. ಹಾದಿಯ ಚೆಲುವೆ ಒಂದು ಹೆಣ್ಣಿನ ವರ್ಣನೆಯನ್ನು ಮಾಡುತ್ತಾ ಸಾಗುತ್ತದೆ. ಆದರೆ ಕೊನೆಗೆ ಆ ಹೆಣ್ಣು ಕಥೆ ಹೇಳುತ್ತಿದ್ದವನ ಹೆಂಡತಿ ಎಂದು ತಿಳಿದ ಕೂಡಲೇ ಪ್ರಾಣೇಶಚಾರ್ಯ ಮಾಯವಾಗುತ್ತಾನೆ. ಆದರೆ ಸಿಗರೇಟಿನ ತುಂಡು ಕಥೆ ನಿಜಕ್ಕೂ ಕುತೂಹಲ ಕೆರಳಿಸುವಂತ ಕಥೆ. ಇದರ ವಸ್ತು ಚಿಕ್ಕದು. ಇಲ್ಲಿ ಸುಬ್ಬುಕೃಷ್ಣ ಮನೆಯ ಯಜಮಾನ ಆತ ಒಂದು ದಿನ ಆಫೀಸಿನಿಂದ ಬರುವ ವೇಳೆಗೆ ಮನೆಯಲ್ಲಿ ಗಮಗಮ ಊದುಬತ್ತಿ ಹಲವು ರೀತಿಯ ತಿನಿಸುಗಳು, ಹೆಂಡತಿ ಸಿನಿಮಾಕ್ಕೆ ರೆಡಿಯಾಗುತ್ತಿರುವದು ಒಂದು ಕಡೆ ಇವನ್ನೆಲ್ಲಾ ಗಮನಿಸಿದ ಸುಬ್ಬುಕೃಷ್ಣನಗೆ ಅನುಮಾನ. ಅವನ ಸೂಕ್ಷ್ಮ ಕಣ್ಣು ಮಂಚದ ಕಡೆ ಹರಿದು ಅಲ್ಲಿ ಒಂದು ಸಿಗರೇಟಿನ ತುಂಡನ್ನು ಗಮನಿಸಿ ಅನುಮಾನಕ್ಕೆ ಒಳಗಾಗುತ್ತಾನೆ. ಅವನ ಸಂಸಾರದಲ್ಲಿ ಗೊಂದಲ ಉಂಟಾಗುತ್ತದೆ. ಕೊನೆಗೆ ಸುಬ್ಬುಕೃಷ್ಣ ನಿಜಾಂಶ ತಿಳಿಯದೆ ಮನೆಯನ್ನು ಬಿಟ್ಟು ಹೊರಡಲು ಸಿದ್ದನಾದರೆ ಇನ್ನೊಂದು ಕಡೆ ಹೆಂಡತಿ ನಾನು ಗಂಡನಿಗೆ ಸುಳ್ಳು ಹೇಳುತ್ತಿದ್ದೇನೆ ಹಾಗೆ ಮಾಡಬಾರದು ಎಂದು ಅವಳು ಗಂಡನಿಗೆ ಸತ್ಯಾಂಶವನ್ನು ತಿಳಿಸುತ್ತಾಳೆ. ಕೊನೆಗೆ ಇಬ್ಬರು ಕೂಡಿ ಸಂತೋಷದಿಂದ ಸಿನಿಮಾಕ್ಕೆ ಹೋಗುತ್ತಾರೆ. ಇಲ್ಲಿ ಒಂದು ಸಿಗರೇಟಿನ ತುಂಡು ಒಂದು ಸಂಸಾರವನ್ನು ಒಡೆಯುವಷ್ಟು ಪರಿಣಾಮಕಾರಿಯಾಗಿರುತ್ತದೆ.

ಪ್ರಣಯಗೀತೆ ಇದು ಸಹ ಒಂದು ಕತೂಹಲ ಕಥೆಯಾಗಿದೆ. ಕಥಾನಾಯಕ ಯಾವಾಗಲೋ ಕವನವನ್ನ ಬರೆದಿರುವುದು ಮದುವೆಯಾದ ಮೇಲೆ ಅವನ ಹೆಂಡತಿಗೆ ಆ ಕವನ ಸಿಗುತ್ತದೆ. ಅದನ್ನು ಓದಿದ ಹೆಂಡತಿ ಗಂಡನ ಮೇಲೆ ಅನುಮಾನ ಪಡುವಂತದ್ದು ಕೊನೆಗೆ ನಿಜಾಂಶ ತಿಳಿದಾಗ ತಪ್ಪಿನ ಅರಿವಾಗುವುದು ಎಂ.ವಿ.ಸೀ. ರವರ ಕಥೆಗಳ ಕೊಡುಗೆಗಳು.

ಬಿಸಿಲು-ಬೆಳದಿಂಗಳು ಅವರ ಗುಣವನ್ನು ಮನದಟ್ಟು ಮಾಡುವ ಕಥಾಸಂಕಲನ. ಇದರಲ್ಲಿ ಬಿಸಿಲೇನೋ, ಬೆಳದಿಂಗಳೇನು? ಎಂದು ವಾಚಕರು ಪ್ರಶ್ನಿಸಿಸಬಹುದು. ಜೀವನದಲ್ಲಿ ತಾಪ,

ದುಃಖ, ನಿಟ್ಟುಸಿರು, ಅವಮಾನ, ಚಿಂತೆ, ಅನಕ್ಷರತೆ, ಅಧೈರ್ಯ ಇವು ಎಲ್ಲಿಲ್ಲದ ಕತ್ತಲೆಯನ್ನು ತುಂಬಿಬಿಡುತ್ತವೆ. ಮಾನವನಿಗೆ ಈ ಕತ್ತಲೆಯೇ ಬಿಸಿಲು ಈ ಉಪಮಾನ ವಿಚಿತ್ರವಾಗಿ ಕಾಣಬಹುದು ಆದರೆ ಬಿಸಿಲು ಎಂದು ತಾಪಕ್ಕೆ ಕಾರಣವಾದದ್ದು.ಇಲ್ಲಿ ಅದೇ ಅರ್ಥ ಅನ್ವಯವಾಗತಕ್ಕದ್ದು. ಹೀಗೇಯೇ ಶಾಂತಿ, ಸುಖ, ನಗು, ಗೌರವ, ನಿಶ್ಚಿಂತೆ, ಐಸಿರೆ, ವಿದ್ಯೆ, ಧೈರ್ಯೋತ್ಸಾಹಗಳು ಅದೇ ಜೀವನಕ್ಕೆ ತಂಪಾದ ಬೆಳಕನ್ನು ತರುತ್ತವೆ. ಇದೇ ಬೆಳದಿಂಗಳು. ಜೀವನದಲ್ಲಿ ಬಿಸಿಲು–ಬೆಳದಿಂಗಳು ನೆಳಲು–ಬೆಳಕಿನಂತೆ, ಮಾವು ಬೇವಿನಂತೆ ಒಂದರೊಡನೊಂದು ಬರತಕ್ಕದ್ದು. ಇದು ಒಂದು ನಿತ್ಯ ಸತ್ಯ ಕೆಲವರ ಜೀವನದಲ್ಲಿ ಬಿಸಲೇ ಹೆಚ್ಚಾಗಿದ್ದು ಮತ್ತೆ ಕೆಲವರ ಜೀವನದಲ್ಲಿ ಬೆಳದಿಂಗಳೇ ಹೆಚ್ಚಾಗಿರಬಹುದು. ಆದರೆ ಒಂದೇ ಒಂದರ ಅನುಭವವನ್ನು ಪಡೆದವರು ಯಾರೂ ಇಲ್ಲ. ಈ ಕಥಾ ಸಂಗ್ರಹದಲ್ಲಿ ಹಾದು ಹೋಗುವ ಪಾತ್ರಗಳಲ್ಲಿ ಜೀವನದ ಈ ಅನುಭವಗಳು ಹಾಸುಹೊಕ್ಕಾಗಿ ಚಿತ್ರಿತವಾಗಿದೆ.

ದೃಷ್ಟಿ ಲಾಭದಲ್ಲಿ ಬರುವ ಶಿವರಾಮಯ್ಯ–ಶಾರದಮ್ಮ ಇವರ ಸಂಸಾರದಲ್ಲಿ ನಡೆದಂತೆ ಗಂಡನಿಗೆ ಸುಖವುಂಟಾದುದ್ದರ ಪರಿಣಾಮವೇ ಹೆಂಡತಿಗೆ ದುಃಖ ಒದಗಿಸಬಹುದು. ಮತ್ತೆ ಒಂದು ದೈಹಿಕವಾದ ಒಂದು ಶಕ್ತಿ ನಾಶವಾಗುವ್ಯದರಿಂದ ಮತ್ತೆ ಇಬ್ಬರಿಗೂ ಇದ್ದದ್ದರಲ್ಲಿಯೇ ತೃಪ್ತಿಪಡುವ ಮನಸ್ಸು ಬರಬಹುದು. ನೀಲಿಯ ಕವರು ತಿಳಿಸುವಂತೆ ಅನಿರೀಕ್ಷಿತವಾದ ಪತ್ರಾಗಮನದಿಂದ ಸಮರಸದ ಹಾಲಿನಲ್ಲಿ ವಿರಸದ ಹುಳಿ ಹಿಂಡಿ ಹೋಗುವುದು ಸಾಧ್ಯ. ಆದರೂ ಮತ್ತೆ ಅನಶ್ಚಯತೆ ಮಾಯವಾಗಿ ಇಂದಿರೆಯ ಕೆನ್ನೆ ಕೆಂಪೇರಿ ಬಿಡುತ್ತದೆ. ಜಟಕಾ ಹೊಡೆಯುವ ಸಾಬಿ ಒಳ್ಳೆಯ ಸನ್ಯಾಸಿಯಂತೆ ವೇದಾಂತ ಭೋಧೆ ಮಾಡುವುದನ್ನು ಕೇಳುತ್ತೇವೆ. ಅವನ ಮಗ ಎಲ್ಲರಿಂದಲೂ ಬಾಡಿಗೆಯನ್ನು ಬಿಡದೇ ವಸೂಲು ಮಾಡುವ ಕದೀಮ. ತನಗೆ ದುಡ್ಡು ಬರಬೇಕಿಲ್ಲವೆಂದು ಎಂದು ಹೇಳುವುದು ನಮ್ಮ ಕಿವಿಗೆ ಬೀಳುತ್ತದೆ. ಮೊದಲು ನಿಷ್ಪ್ರಯೋಜಕನೆಂದು ಹೆಸರುವಾಸಿಯಾಗಿದ್ದರೂ ಸೈನ್ಯಕ್ಕೆ ತನ್ನ ಮನೆಗೆ ಆರ್ಥಿಕ ಸಹಾಯವನ್ನು ದೇಶಕ್ಕೆ ಪ್ರಾಣದಾನವನ್ನು ಮಾಡುವುದು ಸೀನಪ್ಪನ ಚಿತ್ರ ಕಣ್ಮುಂದೆ ಕಟ್ಟುತ್ತದೆ.

ಲಲಿತೆಯನ್ನು ಕಳೆದುಕೊಂಡ ರಾಮಚಂದ್ರ ಲಲಿತ ರಾಗದಲ್ಲಿ ಪ್ರೇಯಸಿಯನ್ನು ಆಹ್ವಾನಿಸಿ ಸಂಗೀತದಲ್ಲಿ ದುಃಖಿಸುವುದು ನಮ್ಮ ಹೃದಯವನ್ನು ಹಿಂಡುತ್ತದೆ. ಚೋಟುದ್ದ ಹುಡುಗನಿಗೆ ಅನ್ನ ಹಾಕುವ ದಾಸಯ್ಯನು ದರಿದ್ರ ಸಹಾಯಕ ಸಂಘವು ನಮ್ಮ ಕಣ್ಮುಂದೆ ಹಾದು ಹೋಗುತ್ತದೆ. ಪಾಶ್ಚಾತ್ಯ ಕತೆಯಾದ ಗಂಡಿನ ಹೃದಯದಲ್ಲಿ ಗಂಡಿನ ಆಲೋಚನೆಗೂ ಅವನ ಕರ್ತವ್ಯ ಬುದ್ಧಿಗೂ ಇರುವ ಹೊಯ್ದಾಟದ ಸೂಕ್ಷ್ಮ ಚಿತ್ರ ಮಾರ್ಮಿಕವಾಗಿ ಚಿತ್ತವನ್ನ ಕಲಕಿ ಬಿಡುತ್ತದೆ.

ಹುಚ್ಚು ಅದರ ಚಿಕಿತ್ಸೆ ಇದು ವಸ್ತುವಾಗುಳ್ಳ ಕಥೆ ತಾಯಿ–ಮಗ. ಅಸಾಧಾರಣಾ ಅವಾಸ್ತವಿಕವಾದರೂ ಹುಚ್ಚಿಯ ಮನಸ್ಸಿನ ಚಿತ್ರವನ್ನು ಮುಂದಿಡುತ್ತದೆ. ಸುಂದರ ಪರಿವರ್ತನೆ ವಾಸ್ತವಾದ ಚಿತ್ರವಾದರೂ ವಿಧವೆಯರ ಮೂಕವೇದನೆಗೆ ಆಕಾರವನ್ನು ತಂದಿಡುತ್ತದೆ. ಭಾವಪ್ರಧಾನವಾದ ಮೋಡದ ದಿಬ್ಬಣದಲ್ಲಿಯೂ ಕರಿಯನ ಚಿಂತೆಗೂ ಕನಸಿಗೂ ನಡುವಣ ವ್ಯತ್ಯಾಸ ಚನ್ನಾಗಿಯೇ ಚಿತ್ರಗೊಂಡಿದೆ.

ಈ ಹೆಸರಿನ ವಿವರಣೆ ಅಷ್ಟೆ ಅಲ್ಲ. ಇದರಲ್ಲಿ ಮತ್ತೊಂದು ಸ್ವಾರಸ್ಯವೂ ಅಡಗಿದೆ. ಯಾವುದು ಬೆಳದಿಂಗಳಾಗಿ ಕಾಣುತ್ತದೆಯೋ ಅದೇ ಬಿಸಿಲಾಗಿಯೂ, ಬಿಸಿಲೇ ಬೆಳದಿಂಗಳಾಗಿಯೂ ಮಾರ್ಪಡುವ ಸನ್ನಿವೇಶಗಳನ್ನು ಕಾಣುತ್ತೇವೆ. ಶಿವರಾಮಯ್ಯನಿಗೆ ಕಣ್ಣುಬಂದ ಮೇಲೆ ಶಾರದಮ್ಮ ಬಿಸಿಲಾದಳು. ಭಾಗ್ಯಮ್ಮ ಮತ್ತು ಅವಳ ಮಗಳು ಬೆಳದಿಂಗಳಾದರು. ಆದರೆ ಇದು ಹೀಗೆ ಇದ್ದದ್ದು ಎಷ್ಟುದಿನ? ಶಿವರಾಮಯ್ಯನ ಕಣ್ಣು ಮತ್ತೆ ದೃಷ್ಟಿಹೀನವಾಗುವತನಕ ಮಾತ್ರ. ಆ ಬಳಿಕದ ಪವಾಡವನ್ನು ನೋಡಿ ಶಾರದಮ್ಮನೇ ಬೆಳದಿಂಗಳು! ಮಿಕ್ಕ ಬಿಸಿಲಿನ ಸಮವಾದವರ ಹೆಸರೇ ಬರುವುದಿಲ್ಲ. ಆಮೇಲೆ ಹೀಗೇಯೆ ಇಂದಿರೆಯ ಗಂಡನ ಕೋಪದ ಬಿಸಿಲು-ಗಂಡಿನ ಹೃದಯ ಗೂಗ್ಲಿಲ್ಮೋವಿನ ಕನಸಿನ ಬೆಳದಿಂಗಳು, ಇತ್ಯಾದಿಯಾಗಿ ಅನೇಕ ಕಥೆಗಳಲ್ಲಿ ಬಿಸಿಲು-ಬೆಳದಿಂಗಳು ಪರ್ಯಾಯ ವ್ಯಾಪ್ತಿ ಸೂಚಕವಾಗಿದೆ.

* * * * *

# ಅಧ್ಯಾಯ-೭

## ಉಪಸಂಹಾರ

ಕನ್ನಡ ಸಾಹಿತ್ಯದ ವಿವಿಧ ಪ್ರಕಾರಗಳಲ್ಲಿ ಸಾಹಿತ್ಯ ಕೃಷಿಮಾಡಿ ಕನ್ನಡ ಸಾಹಿತ್ಯ ಪ್ರಪಂಚಕ್ಕೆ ಪ್ರೋ.ಎಂ.ವಿ.ಸೀತಾರಾಮಯ್ಯನವರು ಸಲ್ಲಿಸಿದ ಸೇವೆ ಅನನ್ಯವಾದದ್ದು. 'ಕನ್ನಡದ ಕಣ್ವ' ತಮ್ಮ ಗುರುಗಳಾದ ಬಿ.ಎಂ.ಶ್ರೀ. ಯವರ ಹೆಸರಿನಲ್ಲಿ "ಬಿ.ಎಂ.ಶ್ರೀ. ಸ್ಮಾರಕ ಪ್ರತಿಷ್ಠಾನ" ವನ್ನು ಸ್ಥಾಪಿಸಿ ಕನ್ನಡದ ವಿದ್ವತ್ ಪ್ರಪಂಚಕ್ಕೆ ನೀಡಿರುವ ಸೇವೆ ನಿಸ್ವಾರ್ಥವಾದದ್ದು. ಈ ಪ್ರತಿಷ್ಠಾನದ ಮೂಲಕ ಅನೇಕ ಸಂಶೋಧನಾ ವಿದ್ಯಾರ್ಥಿಗಳಿಗೆ ಅನುಕೂಲವಾಗುತ್ತದೆ. ಎಂ.ವಿ.ಸೀ.ಯವರು ಸಾಹಿತ್ಯದ ಅನೇಕ ಪ್ರಕಾರಗಳಲ್ಲಿ ಸಾಹಿತ್ಯ ಕೃಷಿ ಮಾಡಿದ್ದರೂ ಸಹ, ಸಣ್ಣ ಕಥಾಸಾಹಿತ್ಯ ಕ್ಷೇತ್ರದಲ್ಲಿ ಅವರು ಮಾಡಿದ ಸೇವೆ ಅನನ್ಯವಾದದ್ದು. ಪ್ರಸ್ತುತ ಅಧ್ಯಯನದಲ್ಲಿ 'ಎಂ.ವಿ.ಸೀ. ರವರ ಸಣ್ಣಕತೆಗಳು; ಒಂದು ಅಧ್ಯಯನ' ಎಂಬ ವಿಷಯದಲ್ಲಿ ಕೆಲವು ಸಂಪಾದಿತ ಕಥಾಸಂಕಲನಗಳ ಮೂಲಕ ತಿಳಿಸಲಾಗಿದೆ.

ಸಾಧನೆಗೆ ದೈಹಿಕ ನ್ಯೂನ್ಯತೆ ಮತು ಮಾನಸಿಕ ಭಾದೆಗಳು ಎಂದು ಅಡ್ಡಿಯಾಗಲಾರದು. ಮಾಡುವ ಕೆಲಸದಲ್ಲಿ ನಿಷ್ಠೆ, ಆಸಕ್ತಿ, ಮನಸ್ಸು ಇವುಗಳಿದ್ದರೆ ಎಂತಹ ಕಾರ್ಯವನ್ನಾದರೂ ಸಾಧಿಸಬಹುದೆಂಬುದನ್ನು ಎಂ.ವಿ.ಸೀ.ಯವರ ಜೀವನ ಸಾಧನೆಯಿಂದ ತಿಳಿಯಲಾಯಿತು. ಅದನ್ನು ಮಾಡಿ ತೋರಿಸಿದ ಸಾಧಕ ಎಂ.ವಿ.ಸೀ.

ಪ್ರಸ್ತುತ ಅಧ್ಯಯನದಲ್ಲಿ ಎಂ.ವಿ.ಸೀ. ರವರ ಕಥಾ ಸಂಕಲನಗಳಲ್ಲಿ ಕೆಲವು ಆಯ್ದ ಕಥೆಗಳನ್ನು ಮಾತ್ರ ನನ್ನ ಅಧ್ಯಯನಕ್ಕೆ ತೆಗೆದುಕೊಂಡಿದ್ದು ಅವುಗಳ ಅಧ್ಯಯನದ ಮೂಲಕ ಅವುಗಳ ಕಥೆಗಳ ಸ್ವರೂಪ, ವಸ್ತು, ಶೈಲಿ, ತಂತ್ರ, ಭಾಷೆ ಹಾಗೂ ಸಣ್ಣಕತೆಗಳಿಗೆ ಅವರ ಕೊಡುಗೆಗಳನ್ನು ತಿಳಿಸಲಾಯಿತು.

ಪ್ರೋ.ಎಂ.ವಿ.ಸೀ. ರವರ ಕಥೆಗಳಲ್ಲಿ ಕಂಡುಬರುವ ಫಲಿತಗಳನ್ನು ಈ ಕೆಳಗಿನಂತೆ ಕಾಣಬಹುದು.

➢ ಈ ಕಥೆಗಳು ಒಂದು ಸಮಕಾಲೀನ ಸಮಾಜವನ್ನು ಅಲ್ಲಿನ ಜನರ ಸಂಸ್ಕೃತಿ, ಆಚಾರ-ವಿಚಾರ, ಅವರ ಜೀವನ ವಿಧಾನಗಳನ್ನು ತಿಳಿಸಿಕೊಡುತ್ತದೆ.

➢ ಎಂ.ವಿ.ಸೀ. ರವರು ಪ್ರಬುದ್ಧಮಾನಕ್ಕೆ ಬಂದರು ಸಹ ಅವರು ಬಾಲ್ಯದಲ್ಲಿ ಕಂಡ ಸಿಹಿ-ಕಹಿಯ ನೆನಪುಗಳನ್ನು ಸಾರುವ ಗೀತೆಗಳಂತೆ ಅವರ ಕಥೆಗಳು ಕಂಡುಬರುತ್ತವೆ.

➢ ಅಂದಿನ ಕಾಲದ ಸಮಾಜದ ಜನರ ಜೀವನ ಶೈಲಿ, ಸಾಮೂದಾಯಿಕ ನೆಲೆ, ಶ್ರೇಣೀಕೃತ ಸಮಾಜ, ಚಾತುವರ್ಣ ಪದ್ದತಿಗಳನ್ನು ಅವರ ಕಥೆಗಳು ಅನಾವರಣ ಮಾಡುತ್ತವೆ.

➤ ಅಂದಿನ ಕಾಲದ ಸಮಾಜದಲ್ಲಿ ಗಂಡು ಹೆಣ್ಣನ್ನು ಮದುವೆಯಾಗಬೇಕಾದರೆ ಗಂಡಿನ ಕಡೆಯವರು ವಧುದಕ್ಷಿಣೆ(ತೆರ) ಕೊಟ್ಟು ಮದುವೆಯಾಗುವ ಪದ್ಧತಿ ಇತ್ತು ಎಂಬುದನ್ನು ತಿಳಿಸಲಾಗಿದೆ.

➤ ಅವರ ಕೆಲವು ಕಥೆಗಳಲ್ಲಿ ಅಂದಿನ ಸಮಾಜದಲ್ಲಿ ಬಾಲ್ಯವಿವಾಹ ಪದ್ಧತಿ ಇತ್ತು ಎಂಬುದನ್ನು ಚಿತ್ರಿಸಿದ್ದಾರೆ.

➤ ಅವರು ಮೈಸೂರಿನ ಒಂದು ಸಾಂಸ್ಕೃತಿಕ ಬದುಕು ಅಂದರೆ ಅಂದು ಜನರಲ್ಲಿ ಪ್ರಚಲಿತವಾಗಿದ್ದ ನಾಟಕ, ಸಂಗೀತ, ಕಲೆಯ ಬಗ್ಗೆ ತಿಳಿಸಿದ್ದಾರೆ.

➤ ಅಂದು ರಾಜಮನೆತನಗಳ ಆಳ್ವಿಕೆ ಇತ್ತು ಎಂಬುದನ್ನು ಚಿತ್ರಿಸಿದ್ದಾರೆ.

➤ ಅಂದಿನ ಸಮಾಜದಲ್ಲಿ ಹಣದ ಚಲಾವಣೆಗಿಂತ ವಿನಿಮಯ ಪದ್ಧತಿ ಸಮಾಜದಲ್ಲಿ ಇತ್ತು ಎಂಬುದನ್ನು ತಿಳಿಸಲಾಗಿದೆ.

➤ ಎಂ.ವಿ.ಸೀ. ರವರ ಕಥೆಗಳಲ್ಲಿ ಸಂಪ್ರದಾಯವನ್ನು ಮೀರಿದ ಅವರು ಸಂಪ್ರದಾಯದಲ್ಲಿ ಇದ್ದು ಮನುಷ್ಯ-ಮನುಷ್ಯನೊಂದಿಗೆ ಅನುಕಂಪ, ಕರುಣೆ, ಸಹಕಾರ ಮನೋಭಾವನೆಯಿಂದ ಇರಬೇಕೆಂದು ತಿಳಿಸಿದ್ದಾರೆ.

➤ ಮನುಷ್ಯನ ಮಾನಸಿಕ ಸಂಘರ್ಷಗಳು, ಕ್ರೌರ್ಯ ಹಾಗೂ ವಿನಾಶಕಾರಿ ಮನಸ್ಥಿತಿ ಕಥೆಗಳಲ್ಲಿ ಚಿಂತಿತ ಅಂಶಗಳಾಗಿವೆ.

➤ ಅಂದಿನ ಸಮಾಜದಲ್ಲಿ ಬ್ರಾಹ್ಮಣ ಜನಾಂಗದ ಸ್ಥಿತಿಗತಿ ಅವರು ಸಹ ಅಂದು ದಲಿತ ಜನಾಂಗದವರಂತೆ ಬಡತನದ ಬೇಗೆಯಲ್ಲಿ ಸೊರಗುತ್ತಿರುವುದನ್ನು ಕಾಣಬಹುದು.

➤ ಅವರ ಕಥೆಗಳಲ್ಲಿ ಕಂಡುಬರುವ ಕೆಲವು ಪಾತ್ರಗಳು ಸಮಾಜದ ಕಟ್ಟುಕಟ್ಟಲೆಗಳನ್ನು ಹೊಡೆದು ಒಂದು ಆದರ್ಶ ಜೀವನ ನಡೆಸುವುದು ಕಾಣುತ್ತದೆ.

➤ ಶತ-ಶತಮಾನಗಳಿಂದ ಮೂಲೆ ಗುಂಪಾಗಿದ್ದ ಸ್ತ್ರೀ ಇಂದು ತನ್ನ ಭಾವನೆಗಳನ್ನು ನಿರ್ಭಯವಾಗಿ ಕಥೆಗಳಲ್ಲಿ ವಿವರಿಸುವುದನ್ನು ಗಮನಸಬಹುದು.

➤ ಅವರ ಕಥೆಗಳಲ್ಲಿ ಪ್ರಧಾನವಾಗಿ ಕಾಣುವುದು ನೈತಿಕ ಪ್ರಜ್ಞೆ ಹಾಗೂ ಅದರಿಂದ ದುಃಖವನ್ನು ಅನುಭವಿಸುವ ಕೆಲವು ಸ್ತ್ರೀ ಪಾತ್ರಗಳನ್ನು ಚಿತ್ರಿಸಿದ್ದಾರೆ.

➤ ಈ ಕಥೆಗಳಲ್ಲಿ ಸ್ತ್ರೀ, ಪುರಷನನ್ನು ವಿರೋಧಿಸಿ ದಿಟ್ಟತನದಿಂದ ತಾನು ಪುರುಷನಿಗಿಂತಲೂ ಕಡಿಮೆಯಿಲ್ಲ ಎಂಬ ರೀತಿಯಲ್ಲಿ ಜೀವನ ಸಾಗಿಸುವುದನ್ನು ನೋಡಬಹುದು.

➤ ಅವರ ಕಥೆಗಳಲ್ಲಿ ಪ್ರಾಮಾಣಿಕತೆ ಮತ್ತು ನಂಬಿಕೆಗೆ ಹೆಚ್ಚು ಒತ್ತನ್ನು ನೀಡಿರುವುದು ಕಂಡುಬರುತ್ತದೆ.

➢ ಅವರ ಕಥೆಗಳಲ್ಲಿ ಬಡತನ, ಹಸಿವು, ನಿರುದ್ಯೋಗ ಸಮಸ್ಯೆಗಳನ್ನು ಪಾತ್ರಗಳ ಮೂಲಕ ಚಿತ್ರಿಸಿದ್ದಾರೆ.

➢ ಅಂದಿನ ಕಾಲದ ಸಮಾಜದಲ್ಲಿ ಶ್ರೇಷ್ಠರೆನಿಸಿಕೊಂಡ ಬ್ರಾಹ್ಮಣರಲ್ಲಿ ಜಾತಿ–ಧರ್ಮದ ಬಗ್ಗೆ ಹಾಗೂ ಸಂಪ್ರದಾಯದ ಬಗ್ಗೆ ಎಂತಹ ನಂಬಿಕೆಗಳು ಇದ್ದವು ಎಂಬುದನ್ನು ತಿಳಿಯಬಹುದು.

ಈ ರೀತಿಯಾಗಿ ಎಂ.ವಿ.ಸೀ. ರವರು ತಮ್ಮ ಕಥೆಗಳಲ್ಲಿ ಸಮಕಾಲೀನ ಸಮಾಜದ ಜನರ ಜೀವನ ಕ್ರಮ, ಅವರ ಪದ್ಧತಿಗಳು, ಅಲ್ಲಿನ ಜನರ ಸಾಂಸ್ಕೃತಿಕ ಬದುಕು ಸಮಾಜದಲ್ಲಿ ಇದ್ದ ಅಂಕು–ಡೊಂಕುಗಳನ್ನು ಸೂಕ್ಷ್ಮವಾಗಿ ತಮ್ಮ ಕಥೆಗಳಲ್ಲಿ ಹಿಡಿದಿದ್ದಾರೆ. ಅವರ ಕಥೆಗಳು ಇಂದಿಗೆ ರುಚಿಸದೇ ಇರಬಹುದು. ಆದರೆ ಅಂದಿನ ಕಾಲಕ್ಕೆ ಅವು ಶ್ರೇಷ್ಠ ಕತೆಗಳಾಗಿದ್ದವು. ಈ ರೀತಿಯ ಕಥೆಗಳು ಉತ್ತಮ ಆಲೋಚನಾ ಕ್ರಮಗಳನ್ನು, ಹೊಸ–ಹೊಸ ಧೋರಣೆಗಳನ್ನು ಕಟ್ಟಿಕೊಡುತ್ತವೆ.

# ಅನುಬಂಧ

**ಅ) ಎಂ.ವಿ.ಸೀ.ಸಾಹಿತ್ಯ ಜೀವನ ಪಥ**

೯-೯-೧೯೧೦ ಜನನ, ವೆಂಕಟದಾಸಪ್ಪ-ಸಾವಿತ್ರಮ್ಮನವರ ಮೂರನೆಯ ಮಗನಾಗಿ, ಮೈಸೂರು.

(ಸಾಧಾರಣ ಸಂವತ್ಸರ, ಭಾದ್ರಪದ ಶುದ್ಧ ಷಷ್ಠಿ)

೧೯೧೬-೨೬ ಪ್ರಾಥಮಿಕ, ಮಾಧ್ಯಮಿಕ, ಪ್ರೌಢಶಾಲೆ: ಸರ್ಕಾರಿ ಶಾಲೆ ಹಾಗೂ ಬನುಮಯ್ಯರವರ ವಿದ್ಯಾಶಾಲಾ, ಮೈಸೂರು.

೧೯೨೦ ಸಗೀತಾಭ್ಯಾಸ (ಮೃದಂಗ) ಪ್ರಾರಂಭ, ಮುಂದೆ ಎಲ್.ರಾಜಾರಾಯರೊಂದದದಿಗೆ ಅಭ್ಯಾಸ.

೧೯೨೧ ಚಿತ್ರಕಲಾಭ್ಯಾಸ ಪ್ರಾರಂಭ.

೧೯೨೨ ಮೈಸೂರು ದಸರಾ ವಸ್ತುಪ್ರದರ್ಶನದಲ್ಲಿ Pen and Ink Drawing ರೇಖಾಚಿತ್ರಗಳಿಗೆ ಪ್ರಶಸ್ತಿ ಪತ್ರ (Certificate of Merit)

೧೯೨೩ ಮದರಾಸಿನ ಕಾಂಗ್ರೇಸ್ ವಸ್ತುಪ್ರದರ್ಶನದಲ್ಲಿ ಅದೇ ಚಿತ್ರಗಳಿಗೆ ಪ್ರಶಸ್ತಿ ಪತ್ರ.

೧೯೨೮ ವಿವಾಹ: ಧರ್ಮಪತ್ನಿ ಸೌ. ಸಾವಿತ್ರಮ್ಮ ಅವರೊಂದಿಗೆ.

೧೯೩೦ ಮೊದಲ ಕವನ 'ಬೀದಿಯೊಳಗಲೆಯುತಿಹಳಾರಿವಳು ಚೆಲುವೆ' ಕವನವನ್ನು ತೀ.ನಂ.ಶ್ರೀ. ಅವರಿಂದ ತಿದ್ದಿಸಿದ್ದು, ಸ್ವಯಂ ಚಿತ್ರ ಬರೆದುಕೊಂಡದ್ದು.

೧೯೩೧ ಬಿ.ಎ. ಪದವಿ, (ಕನ್ನಡ,ಇಂಗ್ಲಿಷ್,ಚರಿತ್ರೆ)

೧೯೩೨ ಕೆ.ವೆಂಕಟಪ್ಪನವರ ಶಿಷ್ಯತ್ವದಲ್ಲಿ ಚಿತ್ರಕಲಾಭ್ಯಾಸ.

೧೯೩೩ ಎಂ.ಎ. ಪದವಿ. ಶ್ರೀ. ಪದಕ (ಕನ್ನಡ) : 'ಆ ಚಿತ್ರಗಳು' ಕವನಕ್ಕೆ, ಚಿತ್ರಕಲೆ ಕಲಿಯಲು ಶಾಂತಿನಿಕೇತನಕ್ಕೆ ಪ್ರಯಾಣ, ಟಿ.ಎಸ್. ವೆಂಕಣ್ಣಯ್ಯನವರಿಂದ ಬೀಳ್ಕೊಡುಗೆ.

೧೫-೧೧-೧೯೩೪ ಮಗಳು ಶಾರದಳ ಜನನ.

೧೯೩೬ ಮೊದಲ ಪ್ರಕಟನೆಗಳು : ೧) ಶಿಲಾಮುಖಿ ೨) ಯೌವನ ಸುಧೆ ಮೊದಲನೇ ಮಗ ವೆಂಕಟೇಶನ ಜನನ (ಮರಣ ೧೯೪೫)

೧೯೩೪-೩೯ ಕನ್ನಡ ಸಾಹಿತ್ಯ ಪರಿಷತ್ತಿನಲ್ಲಿ ಕಾರ್ಯದರ್ಶಿ.

೨೬-೧೧-೧೯೩೯ ೨ನೇ ಮಗ ಭಾಸ್ಕರನ ಜನನ.

೧೯೩೯-೪೬ ಮೈಸೂರು ವಿಶ್ವವಿದ್ಯಾಲಯದ ಕನ್ನಡ-ಇಂಗ್ಲಿಷ್ ಕೋಶದ ಸಹ-ಸಂಪಾದಕ.

೨೫-೬-೧೯೪೩ ೩ನೇ ಮಗ ರಾಮಪ್ರಸಾದನ ಜನನ.

೨೫-೯-೧೯೪೫ ೪ನೇ ಮಗ ರಾಧಾಕೃಷ್ಣನ ಜನನ.

೧೯೪೬ ಬೆಂಗಳೂರು ಸರ್ಕಾರಿ ಕಾಲೇಜಿನಲ್ಲಿ ಅಧ್ಯಾಪಕ ವೃತ್ತಿ ಆರಂಭ. "ಹಕ್ಕಿಹಾಡು" ಕವನ ಸಂಕಲನಕ್ಕೆ ದೇವರಾಜ ಬಹುದ್ದೂರ್ ಹಾಗೂ ಕನ್ನಡ ಸಾಹಿತ್ಯ ಪರಿಷತ್ತಿನ ಬಹುಮಾನ.

೧೯೫೧ "ರಾಘವ ಪ್ರಕಾಶನ" ಪ್ರಾರಂಭ.

"ಮಾದನ ಮಗಳು" ಕಾದಂಬರಿಗೆ ದೇವರಾಜ್ ಬಹದ್ದೂರ್ ಬಹುಮಾನ.

೧೯೫೩ ಬೆಂಗಳೂರು ಸರ್ಕಾರಿ ಕಾಲೇಜಿನ ಕರ್ನಾಟಕ ಸಂಘವನ್ನು ಶ್ರೀ. ಜಿ.ಪಿ.ರಾಜರತ್ನಂ ಅವರಿಂದ ವಹಿಸಿಕೊಂಡದ್ದು.

೨೯-೯-೧೯೫೪ ೫ನೇ ಮಗ ಶೇಷಾದ್ರಿನಾಥನ ಜನನ.

೧೯೫೭ "ಮುಗಿಯದ ಮಾಯೆ" ಕವನ ಸಂಕಲನಕ್ಕೆ ದೇವರಾಜ್ ಬಹುದ್ದೂರ್ ಬಹುಮಾನ.

"ತೊಟ್ಟಿಲು ತೂಗದ ಕೈ" ನಾಟಕಕ್ಕೆ ರಾಜ್ಯ ಸರ್ಕಾರ ಪ್ರಶಸ್ತಿ.

೧೯೫೯ "ಕರ್ನಾಟಕ ಸಂಘ"ದ ಪುನರಾರಂಭ.

೧೯೬೦ "ಜೀವನ ನಾಟಕ" ವ್ಯಕ್ತಿ ಕಥೆಗಳ ಸಂಕಲನಕ್ಕೆ ರಾಜ್ಯ ಸರ್ಕಾರದ ಪ್ರಶಸ್ತಿ.

೧೯೬೧ ಆಕಾಶವಾಣಿಯ ರಾಷ್ಟ್ರೀಯ ಕವಿ ಸಮ್ಮೇಳನದಲ್ಲಿ ಭಾಗವಹಿಸಿದ್ದು.

೧೯೬೩ ಕನ್ನಡ ರೀಡರ್ ಆಗಿ ನೇಮಕ.

೧೯೬೪ ದಕ್ಷಿಣಾಭಾಷಾ ಪುಸ್ತಕ ಸಂಸ್ಥೆಯ ಆಶ್ರಯದಲ್ಲಿ ನಡೆದ ಮಕ್ಕಳ ಸಾಹಿತ್ಯದ ವಿಚಾರ ಗೋಷ್ಠಿಯಲ್ಲಿ ಭಾಗವಹಿಸಿದ್ದು.

೧೯೬೫ ಅಣ್ಣಾಮಲೈ ಹಾಗೂ ಮೈಸೂರು ವಿಶ್ವವಿದ್ಯಾನಲಯಗಳ ಆಶ್ರಯದಲ್ಲಿ ನಡೆದ ಭಾಷಾ ವಿಜ್ಞಾನ ಗೋಷ್ಠಿಯಲ್ಲಿ ಭಾಗವಹಿಸಿದ್ದು.

೧೯೬೭ ಮೈಸೂರು ವಿಶ್ವವಿದ್ಯಾನಲಯದ ಸುವರ್ಣ ಮಹೋತ್ಸವದ ಅಂಗವಾಗಿ ನಡೆದ ಲೇಖಕರ ಸಮ್ಮೇಳನದಲ್ಲಿ ಭಾಗವಹಿಸಿದ್ದು.

೧೯೬೭ ನಿವೃತ್ತಿ, ಮಾರ್ಚ್ ೨೪.

ಸರ್ಕಾರಿ ಕಲಾ ಮತ್ತು ವಿಜ್ಞಾನ ಕಾಲೇಜಿಂದ ನಿವೃತರಾದ ಸಮಯದಲ್ಲಿ ಅಧ್ಯಾಪಕರು ಮತ್ತು ವಿದ್ಯಾರ್ಥಿಗಳ ಪರವಾಗಿ "ರಾಘವ ಸನ್ಮಾನ ಸಮಿತಿ"ಯಿಂದ ಸನ್ಮಾನ (ಅಧ್ಯಕ್ಷತೆ ಡಾ// ಮಾಸ್ತಿ ವೆಂಕಟೇಶ ಅಯ್ಯಂಗಾರ್)

೧೯೬೭ ಶ್ರೀ. ನಿಡುಮಾಮಿಡಿ ಶ್ರೀಗಳವರಾದ ಡಾ.ಜ.ಚ.ನಿ. ಅವರಿಂದ ಸ್ವರ್ಣ ಪದಕ ಸಮೇತ 'ವಿಚಾರ ರತ್ನಾಕರ' ಎಂಬ ಪ್ರಶಸ್ತಿ.

೧೯೬೮-೭೩ ಬೆಂಗಳೂರು ವಿಶ್ವವಿದ್ಯಾನಿಲಯದಲ್ಲಿ ಯು.ಜಿ.ಸಿ ಪ್ರಾಧ್ಯಾಪಕ (೧೯೭೩-೭೫ ಗೌರವ ಪ್ರಾಧ್ಯಾಪಕ)

೧೯೬೮ 'ಕವಿರಾಜಮಾರ್ಗ' ಪ್ರಕಟನೆ.

೧೯೬೯ ಬೆಂಗಳೂರು ವಿಶ್ವವಿದ್ಯಾನಿಲಯ ಕನ್ನಡ ವಿಭಾಗದಲ್ಲಿ ಸರ್ಕಾರಿ ಕಾಲೇಜು ಕರ್ನಾಟಕ ಸಂಘದ ಹೆಸರಿನಲ್ಲಿ 'ಶ್ರೀ ವಿಜಯ ಸ್ವರ್ಣ ಪದಕ' (ಎಂ.ಎ ವಿದ್ಯಾರ್ಥಿಗಳಿಗಾಗಿ) ಸ್ಥಾಪನೆ.

೧೯೭೦ ಮೈಸೂರು ವಿಶ್ವವಿದ್ಯಾನಿಲಯದ ಪ್ರಸಾರಂಗದ ಆಶ್ರಯದಲ್ಲಿ ಮೂರು ವಿಶೇಷ ಉಪನ್ಯಾಸಗಳು (ವಿಷಯ: ಭಾರತೀಯ ಕಾವ್ಯ ಮೀಮಾಂಸೆಗೆ ಕನ್ನಡ ಕವಿಗಳ ಕೊಡುಗೆ")

೧೯೭೧ ಕನ್ನಡ ಸಾಹಿತ್ಯದಲ್ಲಿ ಪರಿಷತ್ತಿನಲ್ಲಿ ತಿಮ್ಮಪ್ಪದಾಸನ ಸ್ಮಾರಕ ದತ್ತಿನಿಧಿ ಸ್ಥಾಪನೆ.

೧೯೭೩ ಕರ್ನಾಟಕ ರಾಜ್ಯ ಸಾಹಿತ್ಯ ಅಕಾಡೆಮಿ ಪ್ರಶಸ್ತಿ.

ಧಾರವಾಡದಲ್ಲಿ ನಡೆದ ದ್ರಾವಿಡ ಭಾಷಾ ವಿಜ್ಞಾನಗಳ ಸಮ್ಮೇಳನದಲ್ಲಿ ಪ್ರಬಂಧ ಮಂಡನೆ.

ಬೆಂಗಳೂರಿನಲ್ಲಿ ಬೆಂಗಳೂರು ವಿಶ್ವವಿದ್ಯಾನಿಲಯದಲ್ಲಿ ನಡೆದ ಭಾಷಾವಿಜ್ಞಾನಗಳ ಸಮ್ಮೇಳನದಲ್ಲಿ ಭಾಗವಹಿಸಿದ್ದು.

೧೯೭೪ ಗೋಖಲೆ ಸಾರ್ವಜನಿಕ ವಿಚಾರ ಸಂಸ್ಥೆಯಲ್ಲಿ ವೈಣಿಕ ವಿದ್ವಾನ್ ಎಲ್.ರಾಜಾರಾವ್ ರೊಂದಿಗೆ "ಲಕ್ಷ್ಮೀನಾರಾಯಣಪ್ಪ ಮತ್ತು ವೆಂಕಟದಾಸಪ್ಪ ಸ್ಮಾರಕ ನಿಧಿ ಸ್ಥಾಪನೆ".

೧೯೭೫ ರಲ್ಲಿ ಕನ್ನಡ ಸಾಹಿತ್ಯ ಪರಿಷತ್ತಿನ ವಜ್ರ ಮಹೋತ್ಸವ ಸಂದರ್ಭದಲ್ಲಿ ಗ್ರಂಥ ಸಂಪಾದನಾ ಸೇವೆಗಾಗಿ ಪ್ರಶಸ್ತಿ.

೧೯೭೮ ರಲ್ಲಿ ಧಾರವಾಡದಲ್ಲಿ ಕರ್ನಾಟಕ ವಿಶ್ವವಿದ್ಯಾನಿಲಯದ ಪ್ರಸಾರಂಗದ ಆಶ್ರಯದಲ್ಲಿ ೩ ವಿಶೇಷ ಉಪನ್ಯಾಸಗಳು (ವಿಷಯ;- "ಕನ್ನಡ ಸಾಹಿತ್ಯದಲ್ಲಿ ಶಾಂತರಸ")

ರಾಜ್ಯ ಸರ್ಕಾರದಿಂದ ಆಜೀವ ಗೌರವ ಮಾಸಿಕ ವೇತನ

೧೯೭೭ (ಬಿ.ಎಂ.ಶ್ರೀ.ಸ್ಮಾರಕ ಪ್ರತಿಷ್ಠಾನದ ಸ್ಥಾಪನೆ)

೧೯೮೦ ರಲ್ಲಿ ರಾಜ್ಯ ಸಾಹಿತ್ಯ ಅಕಾಡೆಮಿ ಪ್ರಶಸ್ತಿ; ಪ್ರಾಚೀನ ಕನ್ನಡ ವ್ಯಾಕರಣಗಳು ಪುಸ್ತಕಕ್ಕೆ

೧೯೮೨ ರ ಗೋಕಾಕ್ ವರದಿ ಹೋರಾಟದಲ್ಲಿ ಪಾಲ್ಗೊಂಡು, ನಗರದ ಸಾಹಿತಿ ಕಲಾವಿದರ ಬಳಗದ ಚಟುವಟಿಕೆಗಳ ಸಹಾಯಕ್ಕಾಗಿ 'ಕನ್ನಡಮ್ಮನ ಕೊರಗು' ಪುಸ್ತಕವನ್ನು ಪ್ರಕಟಿಸಿ ದಾನಮಾಡಿದ್ದು.

೧೯೮೩ ರ ನಗರದ ಉದಯಭಾನು ಕಲಾಸಂಘದ ವತಿಯಿಂದ ರಾಜ್ಯಮಟ್ಟದ ಸನ್ಮಾನ ಮತ್ತು "ಆಸ್ವಾದ" ಅಭಿನಂದನಾ ಗ್ರಂಥ ಹಾಗೂ "ಮೈ.ವೆಂ.ಸಿ.ರಾಘವ" ಅಭಿನಂದನಾ ಸಂಚಿಕೆಗಳ ಪ್ರಕಟಣೆ.

೧೯೮೫ ಕರ್ನಾಟಕ ಸರ್ಕಾರದಿಂದ 'ರಾಜ್ಯ ಪ್ರಶಸ್ತಿ' ಮತ್ತು ಸುವರ್ಣ ಪದಕ

೧೯೮೭ ಶ್ರೀ ಕೃಷ್ಣಬಾಲಲೀಲೆಗೆ ರಾಜ್ಯ ಸಾಹಿತ್ಯ ಅಕಾಡೆಮಿ ಪ್ರಶಸ್ತಿ

೧೯೮೭ ಪತ್ನಿ ವಿಯೋಗ

೯-೯-೧೯೮೯ ೮೦ನೇ ವರ್ಷಕ್ಕೆ ಪಾದಾರ್ಪಣೆ–ಎಂ.ವಿ.ಸೀ.:೮೦ರ ಸನ್ಮಾನ ಸಮಿತಿಯಿಂದ ಸನ್ಮಾನ ಮತ್ತು ಎಂ.ವಿ.ಸೀ ೮೦ರ ಪರಿಚಯ ಗ್ರಂಥ ಪ್ರಕಟಣೆ.

೧೦-೩-೧೯೯೦ 'ಮಾದನ ಮಗಳು' ಕಾದಂಬರಿಯ ಮರುಮುದ್ರಣದ ಬಿಡುಗಡೆ, ಅಭಿನಂದನಾ ಸಮಿತಿಯ ಸಮಾಲೋಚನಾ ಸಭೆ

೧೨-೩-೧೯೯೦ ನಿಧನ.

## ಆ) ಎಂ.ವಿ.ಸೀ ರವರ ಕೃತಿಸೂಚಿ

### ೧.ಕಾವ್ಯ

೧. ಹಕ್ಕಿ ಹಾಡು: ಸತ್ಯಶೋಧನ ಪ್ರಕಟನ ಮಂದಿರ, ಬೆಂಗಳೂರು ೧೯೪೪ (ದೇವರಾಜ ಬಹದ್ದೂರ್ ಸಾಹಿತ್ಯ ನಿಧಿಯ ಬಹುಮಾನ, ೧೯೪೫, ಕನ್ನಡ ಸಾಹಿತ್ಯ ಪರಿಷತ್ತಿನ ಬನುಮಾನ ೧೯೪೫)

೨. ಆ ಚಿತ್ರಗಳು ಮತ್ತು ಇತರ ಕಥನ ಕವನಗಳು : ಸತ್ಯಶೋಧನ ಪ್ರಕಟನ ಮಂದಿರ, ೧೯೪೬ (ಆ ಚಿತ್ರಗಳು : ಬಿ.ಎಂ.ಶ್ರೀ. ರಜತೋತ್ಸವ ಸ್ವರ್ಣ ಪದಕ ಪಡೆದ ಕವಿತೆ, ೧೯೩೩)

೩. ರಾಗ: (ಪ್ರಣಯ ಗೀತೆಗಳು) ಸತ್ಯಶೋಧನ ಪ್ರಕಟನ ಮಂದಿರ ೧೯೪೭.

೪. ಅಶೋಕ ಚಕ್ರ: (ದೇಶಭಕ್ತಿ ಕವನಗಳು) ಸತ್ಯಶೋಧನ ಪ್ರಕಟನ ಮಂದಿರ ೧೯೪೬

೫. ವಿಶ್ವಜ್ಯೋತಿ ಬಾಪು : ಸತ್ಯಶೋಧನ ಪ್ರಕಟನ ಮಂದಿರ ೧೯೪೮

೬. ರಾಷ್ಟ್ರರಥ : ಸತ್ಯಶೋಧನ ಸತ್ಯಶೋಧನ ಪ್ರಕಟನ ಮಂದಿರ ೧೯೫೧.

೭. ರಾಷ್ಟ್ರದಿನೋತ್ಸವ ಗೀತೆ : ರಾಘವ ಪ್ರಕಾಶನ ಬೆಂಗಳೂರು ೧೯೫೪

೮. ಮುಗಿಯದ ಮಾಯೆ : ರಾಘವ ಪ್ರಕಾಶನ, ಬೆಂಗಳೂರು ೧೯೫೮ (ದೇವರಾಜ ಬಹದ್ದೂರ್ ಸಾಹಿತ್ಯ ನಿಧಿಯ ಬಹುಮಾನ)

೯. ಗೀತ ಭಾರತಿ : (ಆಯ್ದ ದೇಶ ಭಕ್ತಿಗೀತೆಗಳ ಸಂಕಲನ) ರಾಘವ ಪ್ರಕಾಶನ, ೧೯೬೯

೧೦. ಹಂಸಪಥ : ರಾಘವ ಪ್ರಕಾಶನ, ೧೯೮೦

೧೧. ಬೀಸಿಬಂದ ಗಾಳಿ : ರಾಘವ ಪ್ರಕಾಶನ, ೧೯೮೦

೧೨. ಮೊದಲ ಹೆಜ್ಜೆ : (ಪ್ರಾರಂಭದ ಕವನಗಳು) ರಾಘವ ಪ್ರಕಾಶನ, ೧೯೮೧

೧೩. ಕಾವ್ಯಾಲಾಪ : (ನಲವತ್ತಾರು ಬಿಡಿ ಪದ್ಯಗಳ ಸಂಕಲನ : ೧೯೪೪, ಸುಮಾರು ೫೦೦ ಪದ್ಯಗಳ ವಿಸ್ತೃತ ಸಂಕಲನ–ರಾಘವ ಪ್ರಕಾಶನ, ೧೯೯೦.

೧೪. ಸೌಂದರ್ಯ ಲಹರಿ : (ಶ್ರೀ. ಶಂಕರಾಚಾರ್ಯ ರಚಿತ ಸಂಸ್ಕೃತ ಸೌಂದರ್ಯ ಲಹರಿಯ ಅನುವಾದ ಷಟ್ಪದಿಯಲ್ಲಿ : ಅಪ್ರಕಟಿತ)

೧೫. ಪುರಾತನ ನಾವಿಕ : (ಕೋಲರಿಚ್ ಕವಿಯ Ancient Mariner ಕವನದ ಅನುವಾದ : ಅಪ್ರಕಟಿತ)

## ೨. ಮಕ್ಕಳ ಪದ್ಯಗಳು

೧೬. ಹೂವಾಡಗಿತ್ತಿ : ಕಾವ್ಯಾಲಯ, ಮೈಸೂರು (೧೯೪೬: ತೃತೀಯ ಆವೃತ್ತಿ ೧೯೬೮)

೧೭. ಹಾವಾಡಿಗ : ಕಾವ್ಯಾಲಯ, ಮೈಸೂರು : ೧೯೫೮ (ದ್ವಿಆ. ೧೯೬೮)

೧೮. ಕೋಡಂಗಿ : ಕಾವ್ಯಾಲಯ, ಮೈಸೂರು : ೧೯೭೯

## ಕಾದಂಬರಿ

೧೯. ಭಾಗ್ಯಲಕ್ಷ್ಮಿ : ಎಸ್.ಎಸ್.ಎನ್ ಬುಕ್ ಡಿಪೋ, ಬೆಂಗಳೂರು : ೧೯೪೨ (ದ್ವಿಮು. ೧೯೪೪)

೨೦. ರಾಬಿನ್‌ಸನ್ ಕ್ರೂಸೊ (೧) : ಎಸ್.ಎಸ್.ಎನ್ ಬುಕ್ ಡಿಪೋ, ಬೆಂಗಳೂರು : ೧೯೪೮

೨೧. ಮಾದನ ಮಗಳು : ಮನೋಹರ ಗ್ರಂಥಮಾಲೆ, ಧಾರವಾಡ ೧೯೫೦, ದ್ವಿಮು. ರಾಘವ ಪ್ರಕಾಶನ ೧೯೮೯ (ದೇವರಾಜ್ ಬಹದ್ದೂರ್ ಸಾಹಿತ್ಯ ನಿಧಿ ಬಹುಮಾನ)

೨೨. ಸೌಭಾಗ್ಯವತಿ : ಎಸ್.ಎಸ್.ಎನ್ ಬುಕ್ ಡಿಪೋ, ಬೆಂಗಳೂರು : ೧೯೫೧

೨೩. ನಂಜಿನ ಸವಿ : ಉಷಾ ಸಾಹಿತ್ಯ ಮಾಲೆ, ಮೈಸೂರು ೧೯೫೨

೨೪. ಸ್ನೇಹದ ಕಾಣಿಕೆ : ರಾಘವ ಪ್ರಕಾಶನ ೧೯೫೩

೨೫. ತಾಯ ಬಯಕೆ : ಸುಧಾ ಪ್ರಕಾಶನ ಬೆಂಗಳೂರು : ೧೯೫೪ (ದ್ವಿಮು. ಶಾರದ ಪ್ರಕಟನಾಲಯ, ಬೆಂಗಳೂರು ೧೯೫೯)

೨೬. ಕುಂಕುಮ ಭಾಗ್ಯ : ಉಷಾ ಸಾಹಿತ್ಯ ಮಾಲೆ, ಮೈಸೂರು ೧೯೫೫

೨೭. ಜೀವನದ ಜೊತೆಗಾತಿ : ಶಾರದಾ ಪ್ರಕಟನಾಲಯ ೧೯೫೯

೨೮. ಜೋಡಿ ಲಕ್ಷ್ಮಿ : (ಇಂಗ್ಲೀಷಿನಿಂದ ಅನುವಾದ) ನ್ಯಾಷನಲ್ ಬುಕ್‌ಟ್ರಸ್ಟ್, ದೆಹಲಿ ೧೯೬೫

೨೯. ಏಳು ಇಪ್ಪಾರಿನ ಮನೆ : (ಹತಾರ್ನನ ಕಾದಂಬರಿ ಅನುವಾದ) ಕಾವ್ಯಾಲಯ ೧೯೬೬

## ಸಾಹಿತ್ಯ ಸಮೀಕ್ಷೆ

೩೦. ಹೊಸಗನ್ನಡ ಸಾಹಿತ್ಯ ಮತ್ತು ಇತರ ಲೇಖನಗಳು : ರಾಘವ ಪ್ರಕಾಶನ, ೧೯೫೮

೩೧. ಕನ್ನಡ ಜೀವನ ಚರಿತ್ರೆ : ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು ೧೯೭೩

೩೨. ಶಾಸ್ತ್ರ ಸಾಹಿತ್ಯ : ಬೆಂಗಳೂರು ವಿಶ್ವವಿದ್ಯಾಲಯ, ಬೆಂಗಳೂರು ೧೯೭೫

೩೩. ಉತ್ತರೋತ್ತರ ಕಾಲೀನ ಹರಿದಾಸರು ಮತ್ತು ಅನುಭಾವ ಕವಿಗಳು : ರಾಘವ ಪ್ರಕಾಶನ, ೧೯೮೮

೩೪. ಸಾಹಿತ್ಯ ಮತ್ತು ಚಿತ್ರಕಲೆ : ರಾಘವ ಪ್ರಕಾಶನ, ೧೯೮೬

೩೫. ಜೈಮಿನಿ ಭಾರತ ಸಮೀಕ್ಷೆ : ರಾಘವ ಪ್ರಕಾಶನ, ೧೯೮೬

ನಾಟಕ

೩೬. ಹೂವಿನ ಆಸೆ : ಭಾರತೀ ಸಾಹಿತ್ಯ ಮಂದಿರ ೧೯೩೬ (ದ್ವಿ. ಮು. ೧೯೪೩)

೩೭. ತೆರೆಮರೆಯ ಚಿತ್ರಗಳು : ಕಾವ್ಯಾಲಯ ೧೯೪೧

೩೮. ಸ್ವಯಂವರ : ರಾಘವ ಪ್ರಕಾಶನ ೧೯೫೩

೩೯. ಕವಿಯ ಹೆಂಡತಿ : ರಾಘವ ಪ್ರಕಾಶನ, ೧೯೫೫

೪೦. ತೊಟ್ಟಿಲು ತೂಗದ ಕೈ : ಶಾರದಾ ಪ್ರಕಟನಾಲಯ ೧೯೫೯ (ಮೈಸೂರು ಸರ್ಕಾರದ ಬಹುಮಾನ)

೪೧. ತಿರುಕಿಯ ಕನಸು : ಅಪ್ರಕಟಿತ

೪೨. ಕುಮಾರ ಗೌತಮ : ಹಂಸಧ್ವನಿ ಪ್ರಕಾಶನ, ಬೆಂಗಳೂರು ೧೯೭೯ (ಮಕ್ಕಳ ನಾಟಕ)

೪೩. ಕೈಕೋಲು : ಕಾವ್ಯಾಲಯ ೧೯೭೯ (ಮಕ್ಕಳ ನಾಟಕ)

೪೪. ಕರುಣೆಯ ಕುಡಿ : ರಾಘವ ಪ್ರಕಾಶನ, ೧೯೮೦ (ಮಕ್ಕಳ ನಾಟಕ)

ಪ್ರಬಂಧಗಳು

೪೫. ಹಿಡಿಹೂವು : ರಾಘವ ಪ್ರಕಾಶನ, ೧೯೪೬ (ಕನ್ನಡಮ್ಮನ ಕೊರಗು ಶೀರ್ಷಿಕೆಯಲ್ಲಿ ಪುನರ್ಮುದ್ರಿತ ೧೯೮೩)

೪೬. ಮುಗಿಲುಗಳು : ಎಸ್.ಎಸ್.ಎನ್. ಬುಕ್ ಡಿಪೋ, ೧೯೫೦ (ದ್ವಿಮು. ಧೂಮಲೀಲೆ ಮತ್ತು ಮುಗಿಲುಗಳು: ರಾಘವ ಪ್ರಕಾಶನ, ೧೯೫೯

೪೭. ಬಾಳಿನ ಬುತ್ತಿ : ಸಾಹಿತ್ಯ ಮಂದಿರ, ಬೆಂಗಳೂರು, ೧೯೫೭

೪೮. ಹಿತಚಿಂತನ : ರಾಘವ ಪ್ರಕಾಶನ, ೧೯೮೮

೪೯. ಪ್ರತಿಮಾಗೃಹ : ರಾಘವ ಪ್ರಕಾಶನ, ೧೯೯೦

## ಅಲಂಕಾರ ಶಾಸ್ತ್ರ

೫೦. ಭಾರತೀಯ ಕಾವ್ಯಮೀಮಾಂಸೆಗೆ ಕನ್ನಡ ಕವಿಗಳ ಕೊಡುಗೆ : ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು ೧೯೭೦

೫೧. ಕನ್ನಡ ಸಾಹಿತ್ಯದಲ್ಲಿ ಶಾಂತರಸ : ಕರ್ನಾಟಕ ವಿಶ್ವವಿದ್ಯಾನಿಲಯ, ಧಾರವಾಡ ೧೯೭೦

## ಸಂಪಾದಿತ ಕೃತಿಗಳು

೫೨. ಕವಿರಾಜ ಮಾರ್ಗ : ಕರ್ನಾಟಕ ಸಂಘ, ಗೌ॥ ಕಾಲೇಜು, ಬೆಂಗಳೂರು ೧೯೬೮, ಇದೇ ಗ್ರಂಥದ ವಿದ್ಯಾರ್ಥಿಗಳ ಆವೃತ್ತಿ : ಡಿ.ವಿ.ಕೆ ಮೂರ್ತಿ, ಮೈಸೂರು, ೧೯೭೫

೫೩. ಉದಯಾದಿತ್ಯಾಲಂಕಾರ : ಡಿ.ವಿ.ಕೆ ಮೂರ್ತಿ, ಮೈಸೂರು ೧೯೬೯

೫೪. ಅರ್ಚನ : ಬೆಂಗಳೂರು ವಿಶ್ವವಿದ್ಯಾಲಯ, ಬೆಂಗಳೂರು ೧೯೭೧

೫೫. ಕೀರ್ತನ ಕುಸುಮಾಂಜಲಿ : ಬಿ.ಎಂ.ಶ್ರೀ.ಪ್ರತಿಷ್ಠಾನ, ಬೆಂಗಳೂರು ೧೯೮೦

೫೬. ಕವಿ ಕೆಳದಿ ವೆಂಕಣ್ಣನ ಕೃತಿಗಳು : (ಕೆಳದಿ ಗುಂಡಾ ಜೋಯಿಸರೊಂದಿಗೆ) ಕೆಳದಿ ಮ್ಯೂಸಿಯಂ, ಕೆಳದಿ ೧೯೮೦

೫೭. ಸೂತ ಭಾರತ : (ಶ್ರೀಕೃಷ್ಣ ಭಟ್, ಎಂ.ಜಿ.ಹೆಗಡೆ ಅವರೊಂದಿಗೆ) ಬಿ.ಎಂ.ಶ್ರೀ.ಪ್ರತಿಷ್ಠಾನ ೧೯೮೨

೫೮. ಸರ್ವಜ್ಞ ವಚನಗಳು : (ಕೆ.ಆರ್.ಗಣೇಶ್ ಮತ್ತು ವಿ.ವೆಂಕಟರಾವ್ ಅವರೊಂದಿಗೆ) : ಬಿ.ಎಂ.ಶ್ರೀ.ಪ್ರತಿಷ್ಠಾನ, ೧೯೮೨

೫೯. ಕೃಷ್ಣದೇವರಾಯನ ದಿನಚರಿ : (ಡಾ.ವಿ.ಎಸ್.ಎಸ್.ಆಚಾರ್ ಅವರೊಂದಿಗೆ) : ಬಿ.ಎಂ.ಶ್ರೀ.ಪ್ರತಿಷ್ಠಾನ, ೧೯೮೩

೬೦. ಧೃವ ಚರಿತ್ರೆ : (ಡಾ.ಎನ್.ಎಸ್.ಲಕ್ಷ್ಮೀನಾರಾಯಣ ಭಟ್ಟರೊಂದಿಗೆ) ಬಿ.ಎಂ.ಶ್ರೀ.ಪ್ರತಿಷ್ಠಾನ, ೧೯೮೩

೬೧. ಶ್ರೀಕೃಷ್ಣ ಬಾಲಲೀಲೆ : ಭಾಗ ೧ ಮತ್ತು ೨, ಬಿ.ಎಂ.ಶ್ರೀ.ಪ್ರತಿಷ್ಠಾನ, ೧೯೮೭

೬೨. ವೀರ ಅಭಿಮನ್ಯು : ಕರ್ನಾಟಕ ಸಂಘ, ಗೌರವ ಕಾಲೇಜು, ೧೯೬೦ (ಶ್ರೀಮತಿ ಎಂ.ಎಲ್ ಲಲಿತಮ್ಮನವರ ಜೊತೆ)

೬೩. ಮಣಿಹ : (ಸಿದ್ದಯ್ಯ ಪುರಾಣಿಕ, ಡಾ.ಶೇಷಶಾಸ್ತ್ರಿಗಳ ಜೊತೆಯಲ್ಲಿ) ಬಿ.ಎಂ.ಶ್ರೀ.ಪ್ರತಿಷ್ಠಾನ, ೧೯೮೨

೬೪. ಹಸ್ತಪ್ರತಿಶಾಸ್ತ್ರ : (ಡಾ.ಚಿದಾನಂದ ಮೂರ್ತಿ ರವರ ಜೊತೆಯಲ್ಲಿ) ಬಿ.ಎಂ.ಶ್ರೀ.ಪ್ರತಿಷ್ಠಾನ, ೧೯೮೩

೬೫. ಚಂದ್ರಚೂಡಾಮಣಿ ಶತಕ : ಬಿ.ಎಂ.ಶ್ರೀ.ಪ್ರತಿಷ್ಠಾನ, ೧೯೮೮

೬೬. ಕುಮಾರವ್ಯಾಸ ಭಾರತ ಸಂಗ್ರಹ : ಬಿ.ಎಂ.ಶ್ರೀ.ಪ್ರತಿಷ್ಠಾನ, ೧೯೮೯

**ಶಾಸ್ತ್ರಸಾಹಿತ್ಯ**

೬೭. ಪ್ರಾಚೀನ ಕನ್ನಡ ವ್ಯಾಕರಣಗಳು : ಕನ್ನಡ ಅಧ್ಯಯನ ಸಂಸ್ಥೆ, ಮಾನಸ ಗಂಗೋತ್ರಿ, ಮೈಸೂರು, ೧೯೮೦, ದ್ವಿಮು. ೧೯೮೯

**ಮಕ್ಕಳ ಸಾಹಿತ್ಯ (ಜೀವನ ಚರಿತ್ರೆ)**

೬೮. ಯುಧಿಷ್ಠಿರ : ರಾಷ್ಟ್ರೋತ್ಥಾನ ಪರಿಷತ್ತು, ಬೆಂಗಳೂರು ೧೯೭೩ (ಕನ್ನಡ ಮತ್ತು ಇಂಗ್ಲೀಷ್‌ಗಳಲ್ಲಿ)

೬೯. ಕವಿ ರನ್ನ : ರಾಷ್ಟ್ರೋತ್ಥಾನ ಪರಿಷತ್ತು, ಬೆಂಗಳೂರು ೧೯೭೬

೭೦. ಕನ್ನಡದ ಕಥೆ : ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು, ೧೯೭೯

೭೧. ವೈಣಿಕ ವಿದ್ವಾನ್ ಎಲ್.ರಾಜಾರಾವ್ : ಐ.ಬಿ.ಹೆಚ್. ಪ್ರಕಾಶನ, ಬೆಂಗಳೂರು ೧೯೮೩

೭೨. ಮಕ್ಕಳ ಸಾಹಿತ್ಯ (ಸಂಪಾದಿತ) : ವಿಶ್ವಕನ್ನಡ ಸಮ್ಮೇಳನ ಪ್ರಕಟನೆ, ಕರ್ನಾಟಕ ಸರ್ಕಾರ ೧೯೮೬

**ಜೀವನ ಚರಿತ್ರೆ**

೭೩. ವಿವೇಕಾನಂದ : (ವೆಲ್ಲೂರಿನ ಶ್ರೀಮತಿ ಕೃಷ್ಣ ಕುಮಾರಿ ಅವರ ತೆಲುಗು ಕೃತಿಯ ಅನುವಾದ) ವಿವೇಕಾ ಪಬ್ಲಿಷರ್ಸ್, ಬೆಂಗಳೂರು ೧೯೫೧

೭೪. ಎ.ಆರ್.ರಾಜಾವರ್ಮ : (ಕೆ.ಎಂ.ಜಾರ್ಜ್ ರವರ ಇಂಗ್ಲೀಷ್ ಕೃತಿಯ ಅನುವಾದ) ಕೇಂದ್ರ ಸಾಹಿತ್ಯ ಅಕಾಡೆಮಿ, ದೆಹಲಿ, ೧೯೮೬

೭೫. ಮುದ್ದಣ್ಣ : (ಇಂಗ್ಲೀಷ್) ಕೇಂದ್ರ ಸಾಹಿತ್ಯ ಅಕಾಡೆಮಿ, ದೆಹಲಿ, ೧೯೮೯

೭೬. ಟಿ.ಎಸ್.ವೆಂಕಣ್ಣಯ್ಯ : ಕನ್ನಡ ಅಧ್ಯಯನ ಸಂಸ್ಥೆ, ಮೈ.ವಿ.ವಿ ೧೯೮೫

**ಮರು ಮುದ್ರಣಗಳು, ಇತ್ಯಾದಿ**

೭೭. ರಾಘವ ಕವನ ಕೋಶ : (ಹಂಸ ಪಥ ಮುಗಿಯದ ಮಾಯೆ ಮತ್ತು ಗೀತ ಭಾರತಿ ಸಂಕಲನಗಳ ಕೂಡು ಸಂಪುಟ) ೧೯೬೯

೭೮. ರಸಮಂಜರಿ : (ಸಂಪಾದಿತ)

೭೯. ಗಂಡನನ್ನು ಗೆದ್ದವರು : (ಭಾಗ್ಯಲಕ್ಷ್ಮಿ ಮತ್ತು ಸೌಭಾಗ್ಯವತಿ ಕಾದಂಬರಿಗಳ ಕೂಡು ಸಂಪುಟ) ಗೀತ ಬುಕ್‌ಹೌಸ್ ಮೈಸೂರು, ೧೯೭೪

೮೦. ರಸಿಕತೆ : (ಲಲಿತ ಪ್ರಬಂಧ : ಮೂರು ಹೊಸ ಪ್ರಬಂಧಗಳ ಜೊತೆಗೆ ಹಳೆಯವು ಕೆಲವನ್ನು ಸೇರಿಸಿ ಪ್ರಕಟಿಸಿದ ಸಂಕಲನ) ಹಂಸಧ್ವನಿ ಪ್ರಕಾಶನ ೧೯೭೭

೮೧. ದಾದಿರನ್ನೆ (ಮಕ್ಕಳಿಗಾಗಿ ಕಥನ ಕವನ : ಆ ಚಿತ್ರಗಳು ಮತ್ತು ಇತರ ಕವನ ಸಂಕಲನಗಳಿಂದ ಆಯ್ದವು ಹಂಸಧ್ವನಿ ಪ್ರಕಾಶನ ೧೯೭೯

೮೨. ಕಾವ್ಯ ಪ್ರದೀಪಿಕೆ : (ಲೇಖಕರು : ಎಂ.ವಿ.ಸೀ, ಜಿ.ವಿ, ಕಾ.ವೆಂ, ಕಾವ್ಯ ಸಮೀಕ್ಷೆ) ಕರ್ನಾಟಕ ಸಂಘ, ಬೆಂಗಳೂರು ೧೯೬೭

೮೩. ಬಿರಿಮುಗ್ಗು : (ವಿದ್ಯಾರ್ಥಿಗಳ ಬರಹ) ಸಂಪಾದಿತ : ಕರ್ನಾಟಕ ಸಂಘ ಗೌ॥ ಕಾಲೇಜು, ಬೆಂಗಳೂರು

೮೪. ಸೊಡರು : (ವಿದ್ಯಾರ್ಥಿಗಳ ಕವನ ಸಂಕಲನ) ಸಂಪಾದಿತ : ಕರ್ನಾಟಕ ಸಂಘ ಗೌ॥ ಕಾಲೇಜು, ಬೆಂಗಳೂರು

೮೫. ವಿಕಾಸ : ಮೂರು ಸಂಚಿಕೆಗಳು : ವಿದ್ಯಾರ್ಥಿಗಳ ಪ್ರಬಂಧಗಳು, ಸಂಪಾದಿತ : ಕರ್ನಾಟಕ ಸಂಘ ಗೌ॥ ಕಾಲೇಜು, ಬೆಂಗಳೂರು

೮೬. ವಿಕಾಸ, ಮೂರು ಸಂಚಿಕೆಗಳು : ವಿದ್ಯಾರ್ಥಿಗಳ ಪ್ರಬಂಧಗಳು, ಸಂಪಾದಿತ : ಕರ್ನಾಟಕ ಸಂಘ ಗೌ॥ ಕಾಲೇಜು, ಬೆಂಗಳೂರು

೮೭. ಚಿನ್ನದ ಬೆಳಸು : ಸಂಪಾದಿತ, ಕನ್ನಡ ಸಾಹಿತ್ಯ ಪರಿಷತ್ತಿನ ಸ್ವರ್ಣ ಮಹೋತ್ಸವದ ಪ್ರಕಟನೆ, ಕನ್ನಡ ಸಾಹಿತ್ಯ ಪರಿಷತ್ತು, ೧೯೭೦

೮೮. ಕೌಸ್ತುಭ : ಸಂಪಾದಿತ : ಕನ್ನಡ ಮತ್ತು ಇಂಗ್ಲೀಷಿನಲ್ಲಿ : ಕನ್ನಡ ಸಾಹಿತ್ಯ ಪರಿಷತ್ತಿನ ವಜ್ರ ಮಹೋತ್ಸವ ಪ್ರಕಟನೆ, ಕನ್ನಡ ಸಾಹಿತ್ಯ ಪರಿಷತ್ತು, ೧೯೭೭

೮೯. ಆಕಾಶಯಾನ : (ಕೆ.ಪಿ.ರಾವ್ ರವರ ಆಂಗ್ಲ ಕಿರು ಹೊತ್ತಿಗೆಯ ಅನುವಾದ) ಮೈಸೂರು ವಿಶ್ವವಿದ್ಯಾನಿಲಯ, ೧೯೪೪

೯೦. ಧೀಮಂತ (ಡಿ.ವಿ.ಜಿ. ಸಂಸ್ಮರಣ ಸಂಪುಟ) : ಗೋಖಲೆ ಸಾರ್ವಜನಿಕ ವಿಚಾರ ಸಂಸ್ಥೆ, ಬೆಂಗಳೂರು ೧೯೮೮.

## ಎಂ.ವಿ.ಸೀ ಅವರನ್ನು ಕುರಿರು ಬಂದಿರುವ ಗ್ರಂಥಗಳು

೧. ಆಸ್ವಾದ : ಅಭಿನಂದನಾ ಗ್ರಂಥ, ಉದಯ ಭಾನು ಕಲಾಸಂಘ, ಕೆಂಪೇಗೌಡ ನಗರ, ಬೆಂಗಳೂರು–೮೩.

೨. "ಮೈ.ವೆಂ.ಸೀ.ರಾಘವ : ಕಲಾದರ್ಶನ ವಿಶೇಷ ಸಂಚಿಕೆ, ಉದಯ ಭಾನು ಕಲಾಸಂಘ, ಕೆಂಪೇಗೌಡ ನಗರ, ಬೆಂಗಳೂರು–೮೩.

೩. ಎಂ.ವಿ.ಸೀ. ೮೦ : ( ಪರಿಚಯ ಗ್ರಂಥ) ಎಂ.ವಿ.ಸೀ. ೮೦ ಸನ್ಮಾನ ಸಮಿತಿ, ಬೆಂಗಳೂರು ೧೯೮೯

೪. ಲೋಚನಾ : ಎಂ.ವಿ.ಸೀ ವಿಶೇಷಾಂಕ, ಬಿ.ಎಂ.ಶ್ರೀ. ಪ್ರತಿಷ್ಠಾನ, ಜೂನ್ ೧೯೯೧

೫. ಎಂ.ವಿ.ಸೀ. ಸಂಸ್ಕರಣೆ : , ಬಿ.ಎಂ.ಶ್ರೀ. ಪ್ರತಿಷ್ಠಾನ

೬. ಕದಂಬ : ಎಂ.ವಿ.ಸೀ. ಅವರ ಸಂಶೋಧನಾ ಲೇಖನಗಳ ಸಮಗ್ರ ಸಂಪುಟ : ಎಂ.ವಿ.ಸೀ. ಸಂಸ್ಕರಣ ಸಮಿತಿ

## ೩) ಸಣ್ಣಕತೆ ಆಕರಗಳು

೧. ಶಿಲಾಮುಖಿ : (ಹತಾರ್ನಿನ ೩ ಕಥೆಗಳ ರೂಪಾಂತರ) : ಭಾರತೀ ಸಾಹಿತ್ಯ ಮಂದಿರ, ಬೆಂಗಳೂರು ೧೯೩೬

೨. ಯೌವ್ವನ ಸುಧೆ : (ಹತಾರ್ನಿನ ೪ ಕಥೆಗಳ ರೂಪಾಂತರ) ಸ್ವಂತ ಪ್ರಕಟನೆ, ೧೯೪೬

೩. ಮಾರ್ಗದರ್ಶನ : (೧೩ ಸಣ್ಣಕತೆಗಳು) ಮನೋಹರ ಗ್ರಂಥಮಾಲೆ, ಧಾರವಾಡ ೧೯೪೦, (ದ್ವಿಮು. ೧೯೪೮)

೪. ರತಿದೇವಿ ಮತ್ತು ಇತರ ಕಥೆಗಳು : (೭ ಸಣ್ಣಕತೆಗಳು) : ಸತ್ಯಶೋಧನಾ ಪ್ರಕಟನಾ ಮಂದಿರ, ಬೆಂಗಳೂರು, ೧೯೪೫

೫. ಕರುಣಾಲಹರಿ : (೧೧ ಸಣ್ಣಕತೆಗಳು) ಶಾರದಾ ಮಂದಿರ, ಮೈಸೂರು, ೧೯೫೫

೬. ಬಿಸಿಲು-ಬೆಳದಿಂಗಳು : (ದ್ವಿಮು. ರಾಘವ ಪ್ರಕಾಶನ ೧೯೫೪)

೭. ಜೀವನ ನಾಟಕ : (೧೧ ವ್ಯಕ್ತಿ ಕಥೆಗಳು) : ರಾಘವ ಪ್ರಕಾಶನ ೧೯೬೧ (ರಾಜ್ಯ ಸರ್ಕಾರದ ಪ್ರಶಸ್ತಿ)

೮. ಗುಂಡಿನೇಟು ಮತ್ತು ಇತರೆ ಕತೆಗಳು : (ಪುಷ್ಕಿನ್ನನ ೫ ಕಥೆಗಳ ಅನುವಾದ) ಕರ್ನಾಟಕ ಸಂಘ, ಗೌ॥ ಕಾಲೇಜು ಬೆಂಗಳೂರು

೯. ನಿಲ್ದಾಣಗಳ ನಡುವೆ : (೨೫ ಸಣ್ಣಕಥೆಗಳು) : ರಾಘವ ಪ್ರಕಾಶನ ೧೯೭೪

೧೦. ಶೃಂಗಾರ ವಿಹಾರ : (ಕನ್ನಡ ಕಾವ್ಯಗಳಿಂದ ಆಯ್ದ ಪ್ರಣಯ ಪ್ರಸಂಗಗಳು) ರಾಘವ ಪ್ರಕಾಶನ, ೧೯೮೬

# ಗ್ರಂಥ ಋಣ


೧. ಜಿ.ಎಸ್.ಆಮೂರ – ೨೦೦೩ – ಕನ್ನಡ ಕಥನ ಸಾಹಿತ್ಯ: ಸಣ್ಣಕತೆ, ಸ್ನೇಹಾ ಪ್ರಿಂಟರ್ಸ್, ಬೆಂಗಳೂರು

೨. ಉಮಾಪತಿ – ೧೯೫೭ – ಸಾಹಿತ್ಯ ಸ್ವರೂಪ, ಸುದರ್ಶನ ಪ್ರಕಾಶನ, ತಾರಾ ನಿವಾಸ:: ತಿಪಟೂರು

೩. ಡಾ. ಕರೀಗೌಡ ಬೀಚನಹಳ್ಳಿ – ೨೦೦೩ – ಶತಮಾನಗಳ ಸಣ್ಣಕತೆಗಳ ಸಮೀಕ್ಷೆ ಕರ್ನಾಟಕ ಸಾಹಿತ್ಯ ಅಕಾಡೆಮಿ, ಬೆಂಗಳೂರು.

೪. ಕೀರ್ತಿನಾಥ ಕುರ್ತಕೋಟಿ – ೨೦೦೮ – ಯುಗಧರ್ಮ ಮತ್ತು ಸಾಹಿತ್ಯ ದರ್ಶನ ಮನೋಹರ ಗ್ರಂಥಮಾಲ ಧಾರವಾಡ

೫. ಕೀರ್ತಿನಾಥ ಕುರ್ತಕೋಟಿ – ೨೦೦೧ – ರೊಮ್ಯಾಂಟಿಸಮ್ ಕರ್ನಾಟಕ ಸಾಹಿತ್ಯ ಅಕಾಡೆಮಿ, ಕನ್ನಡ ಭವನ, ಜೆ.ಸಿ. ರಸ್ತೆ, ಬೆಂಗಳೂರು.

೬. ಸಿ.ಪಿ.ಕೆ (ಅನುವಾದ) – ೧೯೬೫ – ಸಾಹಿತ್ಯ ಪ್ರವೇಶ, ಕರ್ನಾಟಕ ಸಹಕಾರಿ ಪ್ರಕಾಶನ ಮಂದಿರ ಚಾಮರಾಜ ಪೇಟೆ ಬೆಂಗಳೂರು–೧೮.

೭. ಗಿರಡ್ಡಿ ಗೋವಿಂದರಾಜು – ೧೯೬೫ – ಸಣ್ಣಕತೆಯ ಹೊಸ ಒಲವುಗಳು ಸಂಕ್ರಮಣ ಪ್ರಕಾಶನ, ಧಾರವಾಡ

೮. ಪ್ರೊ.ಕೆ.ನರಸಿಂಹಮೂರ್ತಿ – ೧೯೯೭ – ಅತ್ಯುತ್ತಮ ಸಣ್ಣಕತೆಗಳು, ಬಿ.ಎಂ.ಶ್ರೀ. ಅಚ್ಚುಕೂಟ, ಕನ್ನಡ ಸಾಹಿತ್ಯ ಪರಿಷತ್ತು

೯. ಜಿ.ಹೆಚ್.ನಾಯಕ – ೧೯೮೦ – ಅನಿವಾರ್ಯ, ಸಾಹಿತ್ಯ ವಿಮರ್ಶೆ ಅಕ್ಷರ ಪ್ರಕಾಶನ, ಸಾಗರ

೧೦ ಬರಗೂರು ರಾಮಚಂದ್ರಪ್ಪ (ಸಂ) – ೧೯೯೨ – ಕನ್ನಡ ಸಾಹಿತ್ಯ ಸಮೀಕ್ಷೆ

ಕನ್ನಡ ಸಾಹಿತ್ಯ ಅಕಾಡೆಮಿ, ಬೆಂಗಳೂರು.

೧೧. ಮಾಸ್ತಿ ಕಥಾ ಸಮೀಕ್ಷೆ – ೧೯೯೩ – ಮೂರು ದತ್ತಿ ಉಪನ್ಯಾಸಗಳು

ಬಿ.ಎಂ.ಶ್ರೀ. ಸ್ಮಾರಕ ಪ್ರತಿಷ್ಠಾನ, ಬೆಂಗಳೂರು.

೧೨. ರಾಜಪ್ಪ ದಳವಾಯಿ – ೧೯೯೬ – ಕನ್ನಡ ಸಾಹಿತ್ಯಕೋಶ,

ಕದಿರು ಪ್ರಕಾಶನ, ಮೈಸೂರು

೧೩. ಶ್ರೀವತ್ಸ, ಅನಂತ ಪದ್ಮರಾವ್, ಎಚ್.ಎಂ. ರಂಗನಾಥ್ – ೧೯೮೩ – ಆಸ್ವಾದ

ಉದಯ ಭಾನು ಕಲಾಸಂಘ , ಬೆಂಗಳೂರು –೧೧.

೧೪. ತ.ಸು.ಶಾಮರಾಯರು – ೨೦೦೯ – ಕನ್ನಡ ಸಾಹಿತ್ಯ ಚರಿತ್ರೆ,

ತಳುಕಿನ ವೆಂಕಣ್ಣಯ್ಯ ಸ್ಮಾರಕ ಗ್ರಂಥಮಾಲೆ, ಮೈಸೂರು

೧೫. ಜಿ.ಎಸ್. ಶಿವರುದ್ರಪ್ಪ – ೧೯೮೧ – ನವೋದಯ, ನೆಲಮನೆ ಪ್ರಕಾಶನ,

ಕೆ.ಜಿ.ಕೊಪ್ಪಲು ಮೈಸೂರು.

೧೬. ಜಿ.ಎಸ್. ಶಿವರುದ್ರಪ್ಪ (ಸಂ) – ೧೯೯೦ – ಕನ್ನಡ ಸಾಹಿತ್ಯ ಸಂದರ್ಭ,

ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು.

೧೭. ಎಸ್.ವಿ.ಶ್ರೀನವಾಸರಾವ್ – ೨೦೦೬ – ಎಂ.ವಿ.ಸೀ. ವ್ಯಕ್ತಿಚಿತ್ರ ಮತ್ತು ಸೂಕ್ತಿಗಳು,

ಬಿ.ಎಂ.ಶ್ರೀ. ಸ್ವಾರಕ ಪ್ರತಿಷ್ಠಾನ ಬೆಂಗಳೂರು.

೧೮. ಎಲ್.ಎಸ್.ಶೇಷಗಿರಿರಾವ್ – ೧೯೯೯ – ಹೊಸಗನ್ನಡ ಸಾಹಿತ್ಯ ಚರಿತ್ರೆ,

ಅಂಕಿತ ಪುಸ್ತಕ, ಬೆಂಗಳೂರು

೧೯. ಪ್ರೋ.ಎಂ.ವಿ.ಸೀತಾರಾಮಯ್ಯ – ೧೯೭೧ – ಅರ್ಚನ, ಬೆಂಗಳೂರು ವಿಶ್ವವಿದ್ಯಾಲಯ,

ಬೆಂಗಳೂರು.

೨೦. ಡಾ. ಸಿ.ಬಿ.ಹೊನ್ನಯ್ಯ – ೨೦೦೫ – ಕನ್ನಡ ಸಾಹಿತ್ಯ ಸಂಸ್ಕೃತಿ ಮೀಮಾಂಸೆ,

ಜೈಭೀಮ್ ಪ್ರಕಾಶನ, ಬೆಂಗಳೂರು.